# ಬಾರಮಾಸ

ಸಂಶೋಧಕ - ಸಂಪಾದಕ

## ಶಾಂತರಸ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೭೬

# ಕಲ್ಲೂರು ಲಿಂಗಣ್ಣವೊಡೆಯ ವಿರಚಿತ

---

# ಬಾರಮಾಸ

**ಸಂಶೋಧಕ - ಸಂಪಾದಕ**
**ಶಾಂತರಸ**




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩೨೧೧

*BARAMASA*
Edited by *Sri Shantharasa*
Published by The Director of Prasaranga, Kannada University, Hampi - 583211. First Impression 1993. Karnataka.
Pp. xx + 120 . Rs. 45.00.



ಪ್ರಕಾಶಕರು
ನಿರ್ದೇಶಕ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩೨೧೧

ಮುಖಪುಟ ಮತ್ತು ರೇಖಾಚಿತ್ರವಿನ್ಯಾಸ:
ವಿಜಯ ಹಾಗರಗುಂಡಗಿ

ಮುಖಪುಟದ ಅಕ್ಷರವಿನ್ಯಾಸ :
ಸುರೇಶ ವೈದ್ಯ

ಬೆಲೆ : ರೂ ೪೫.೦೦

ಮುದ್ರಣ
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
ಜೆ.ಪಿ.ನಗರ
ಬೆಂಗಳೂರು

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಶಾಸ್ತ್ರ - ಕಲೆ, ಅಭಿಜಾತ - ಜಾನಪದ, ಮಾರ್ಗ - ದೇಸಿ, ಸ್ವಕೀಯ -ಪರಕೀಯ, ಪೌರ್ವಾತ್ಯ - ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿ ಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ. ಅವಕಾಶವೂ ಇದೆ.

ಹೀಗೆ ಮೂಡಿಬರುವ ಸಾಹಿತ್ಯ ಪ್ರಕಟವಾಗಬೇಕು; ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ.

ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅವೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ. ನಮ್ಮ ಪ್ರಸಾರಾಂಗ ಇದಕ್ಕಿಂತ ವಿಶಾಲವಾದ, ಹೆಚ್ಚು ಪರಿಣಾಮಕಾರಿಯಾದ ಪರಿಪ್ರೇಕ್ಷ್ಯವನ್ನು ಕಟ್ಟುವದರಲ್ಲಿ ತೊಡಗಿದೆ. ಪ್ರಸಾರಾಂಗದ ಪ್ರಕಟಣೆಗಳಿಗೆ ಇಂಥ ಒಂದು ಸಾರ್ಥಕವಾಗಬಲ್ಲ ಉದ್ದೇಶವಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಈ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆಯೆಂದರೂ ತಪ್ಪಿಲ್ಲ. ಈ ದೃಷ್ಟಿಯಿಂದ ಈ ವರ್ಷ ಕೆಲವು ಪುಸ್ತಕಗಳನ್ನು ನಾವು ಪ್ರಕಟಿಸುತ್ತಿದ್ದೇವೆ.

'ಬಾರಮಾಸ ' ಉತ್ತರ ಭಾರತದ ಭಾಷೆಗಳಿಗೆ ಒಂದು ವಿಶಿಷ್ಟವಾದ ಒಂದು ಪ್ರಕಾರ. ನಿಸರ್ಗವರ್ಣನೆ ಮತ್ತು ವಿರಹಗಳು ಇದರ ಕೇಂದ್ರ ಆಶಯಗಳು. ಕನ್ನಡದಲ್ಲಿ ಬಹಳ ವಿರಳವಾದ ಈ ಬಾರಮಾಸವನ್ನು ಹಿರಿಯ ಲೇಖಕ ಶ್ರೀ ಶಾಂತರಸರು ಸಂಪಾದಿಸಿಕೊಟ್ಟು ನಮಗೆ ಉಪಕಾರ ಮಾಡಿದ್ದಾರೆ. ಶಾಂತರಸರ ಆಳವಾದ ಅಧ್ಯಯನ, ಶಾಸ್ತ್ರಿಯವಾದ ಸಂಶೋಧನೆಯ ಶ್ರಮ ಇದರ ಹಿಂದೆ ಎದ್ದುಕಾಣುತ್ತದೆ. ಇದು ಕನ್ನಡ ಸಂಶೋಧನಾ ಕ್ಷೇತ್ರಕ್ಕೆ ಒಂದು ವಿಶಿಷ್ಟ ಕಾಣಿಕೆ.

**ಚಂದ್ರಶೇಖರ ಕಂಬಾರ**
ಕುಲಪತಿ

# ಅರ್ಪಣೆ

**ಹಿಂದುಧರ್ಮದ ಆಚಾರ ವಿಚಾರ**
**ಪೌರಾಣಿಕ ಪ್ರತಿಮೆ**
**ಮುಂತಾದುವುಗಳನ್ನು ಬಳಸಿಕೊಂಡು**
**ಬಾರಮಾಸ ಕಾವ್ಯ ಬರೆದ**
**ಉರ್ದುಕವಿಗಳು**

ಅಫಜಲ್
ಉಜಲತ್
ವಹಿಷತ್ (ಮೀರ್ ಬಹಾದ್ದುರ್ ಅಲಿ)
ಹಜರತ್ ಜೊಹರಿ
ಸುಂದರಕಲಿ ಕವಿ
ಮಕ್ಸೂದ್
ಮೌಲ್ವಿ ಹಫೀಜುಲ್ಲಾ ಖಾದರಿ(ನೇಹ)
ಮಫ್ತಿ ಇಲಾಹಿ ಬಕ್ಷ್
ವಹಾಬ್
ನಜೀಬ್
ರಂಜ್
ಅಬ್ದುಲ್ಲಾ ಅನ್ಸಾರಿ

**- ಅವರಿಗೆ**

**ಲಿಂಗ**
**ಲಿಂಗಯ್ಯ**
**ಲಿಂಗಣ್ಣ**
**ಲಿಂಗವೊಡೆಯ**
**ಲಿಂಗಣ್ಣವೊಡೆಯ**
**ಲಿಂಗಣ್ಣಾಚಾರ್ಯ**

- ಇವೆಲ್ಲ ಒಬ್ಬ ಕವಿಯ ಹೆಸರುಗಳೇ.

ಕಲ್ಲೂರು ಪ್ರಮುಖರು ಬರೆದುಕೊಟ್ಟ ಎರಡು ಪತ್ರಗಳಲ್ಲಿ
ಈತನ ಹೆಸರು'ಲಿಂಗಣ್ಣವೊಡೆಯ' ಎಂದಿದೆ.
ಇದೇ ಈತನ ನಿಜವಾದ ಹೆಸರು.

'ಲಿಂಗಣ್ಣವೊಡೆಯ' ಎಂಬ ಹೆಸರನ್ನು ಪ್ರಮುಖವಾಗಿಟ್ಟುಕೊಂಡು
ಮೇಲೆ ಹೇಳಿದ ಎಲ್ಲ ಹೆಸರುಗಳನ್ನು ಕಾವ್ಯದಲ್ಲಿ ಬಳಸಲಾಗಿದೆ.

ಪರಧರ್ಮ ಸಹಿಷ್ಣುತೆ ಗೌರವ ಮತ್ತು
ಕೋಮು ಸೌಹಾರ್ದ ಸಾರುವ ಸುಂದರ ಕಾವ್ಯ ಬಾರಮಾಸ

# ಮುನ್ನುಡಿ

೧

ಕರ್ನಾಟಕಸಂಸ್ಕೃತಿಯ ಅಧ್ಯಯನದ ದೃಷ್ಟಿಯಿಂದ ಬಹುಮಟ್ಟಿಗೆ ಅಲಕ್ಷಿತ ಕ್ಷೇತ್ರವಾಗಿಯೇ ಉಳಿದಿರುವ ಹೈದರಾಬಾದ್ ಕರ್ನಾಟಕವನ್ನು ಮುನ್ನೆಲೆಗೆ ತರಲು ಸತತ ಪ್ರಯತ್ನ ನಡೆಸಿರುವ ಹಿರಿಯರಲ್ಲಿ ಶಾಂತರಸರು ಮುಖ್ಯರಾದವರು. ಐತಿಹಾಸಿಕ ಶ್ರೀಮಂತಿಕೆ ಮತ್ತು ಸಮಕಾಲೀನ ರಿಕ್ತತೆಗಳು ಒಗ್ಗೂಡಿದಾಗ, ಇತಿಹಾಸವೂ ಮರವೆಗೆ ಸಂದುಹೋಗುವ ಒತ್ತಡಗಳು ನಿರ್ಮಾಣವಾಗುತ್ತವೆ. ಹೀಗಾದಾಗ ಅನನ್ಯತೆಯನ್ನು ಪೊರೆಯುವ ಮತ್ತು ಬೆಳೆಸುವ ಸವಾಲನ್ನು ಹಲ್ಲುಕಚ್ಚಿ ಸ್ವೀಕರಿಸಬೇಕಾಗುತ್ತದೆ.

ಆದರೆ ಇಲ್ಲೊಂದು ಕುತೂಹಲಕಾರಿಯಾದ ಸಂಗತಿಯಿದೆ. ಮೇಲು ನೋಟಕ್ಕೆ ದೇಶೀ ಸಂಸ್ಕೃತಿಯ ನೆಲೆಗಳನ್ನು ತುಳಿದಿಡುವಂತೆ ತೋರುವ ಅನ್ಯ ಸಂಸ್ಕೃತಿಯ ವಿವರಗಳು, ವಾಸ್ತವದಲ್ಲಿ ಹಾಗೆ ಮಾಡುತ್ತಿರುವುದಿಲ್ಲ. 'ಅನ್ಯ'ದ ಸಂಪರ್ಕವಿಲ್ಲದೆ ದ್ವೀಪಸದೃಶವಾಗಿ ಉಳಿದ ಸಂಸ್ಕೃತಿ ನೆಲೆಗಳಿಗಿಂತ, ಇಂತಹ ದ್ವಿ-ಸಾಂಸ್ಕೃತಿಕ (Bi-Cultural) ನೆಲೆಗಳು ಹೆಚ್ಚು ವೈವಿಧ್ಯಮಯವಾಗುತ್ತವೆ. ಆರೋಗ್ಯಕರವಾದ ಕೊಳು-ಕೊಡೆಗಳ ಪರಿಣಾಮವಾಗಿ, ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪ, ಜಾನಪದ ಮುಂತಾದ ಸಂಸ್ಕೃತಿವಲಯಗಳೆಲ್ಲವೂ ಹೊಸ ರಕ್ತ ಸಂಚಾರದ

ಸೌಲಭ್ಯವನ್ನು ಪಡೆಯುತ್ತವೆ. ಒಂದು ನೆಲೆಯಲ್ಲಿ ಮಾರಕವೆಂದು ತೋರುವ ಆಕ್ರಮಣ, ಆಡಳಿತಗಳು ತಮಗೂ ತಿಳಿಯದಷ್ಟು ನಿರುದ್ದೇಶವಾಗಿ ಸಂಸ್ಕೃತಿ ಪೋಷಕವಾಗುತ್ತವೆ. ಹೈದರಾಬಾದ್ ಕರ್ನಾಟಕ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಅವಿರತವಾಗಿ ನಡೆದ ಹಿಂದೂ-ಮುಸ್ಲಿಂ ಸಂಪರ್ಕವು ಇಂಥ ಸಂಸ್ಕೃತಿವಿಕಸನದ ಸಾಧ್ಯತೆಗಳನ್ನು ಖಂಡಿತವಾಗಿಯೂ ಬೆಳೆಸಿದೆ.

ಶ್ರೀ ಶಾಂತರಸರು ಸಂಪಾದನೆ ಮಾಡಿ, ಹೊರ ತರುತ್ತಿರುವ 'ಬಾರಮಾಸ' ಬೆಂಕಿ ಹತ್ತಿದ ಮನೆಯಿಂದ ಉಳಿಸಿಕೊಂಡ ನಿಧಿಯಂತೆ ಅಮೂಲ್ಯವಾಗಿದೆ. ಕನ್ನಡ ಸಾಹಿತ್ಯವನ್ನು ಕುರಿತಂತೆ ಇದುವರೆಗೆ ಬಂದ ಹತ್ತುಹಲವು ಬರವಣಿಗೆಗಳಲ್ಲಿ ಇಂಥದೊಂದು ಪ್ರಕಾರದ ಪ್ರಸ್ತಾಪವೂ ಇಲ್ಲದಿರುವುದು ನನ್ನ ಮಾತಿಗೆ ಸಾಕ್ಷಿಯಾಗಿದೆ. ಜಾನಪದ ಮತ್ತು ಶಿಷ್ಟ ಸಾಹಿತ್ಯಗಳ ಅಂಚಲಭೂಮಿಯಲ್ಲಿದ್ದು ಎರಡು ಬಗೆಯ ವಿದ್ವಾಂಸರಿಂದಲೂ ನಿರ್ಲಕ್ಷಿತವಾಗಿರುವ ಈ ಪ್ರಕಾರದ ಈ ಸ್ಥಿತಿಗೆ ಕನ್ನಡದಲ್ಲಿ ಕೇವಲ ಎರಡು ಬಾರಮಾಸಗಳು ದೊರಕಿರುವುದೂ ಕಾರಣವಿರಬಹುದು.

ಶಾಂತರಸರ ಪ್ರಸ್ತಾವನೆಯು 'ಬಾರಮಾಸ'ದ ಬಗ್ಗೆ ಅನೇಕ ಮೌಲಿಕವಾದ ವಿವರಗಳನ್ನು ನೀಡುತ್ತದೆ. ದಕ್ಷಿಣಭಾರತದ ಭಾಷೆಗಳಲ್ಲಿ ಅದು ಪ್ರಚುರವಾಗಿಲ್ಲವೆಂಬ ಅವರ ಅಭಿಪ್ರಾಯ ಸರಿಯಾದುದು. ಆದರೆ ಉತ್ತರ ಭಾರತ, ಪೂರ್ವಭಾರತ ಹಾಗೂ ಪಶ್ಚಿಮ ಭಾರತದ ಬಹುಪಾಲು ಭಾಷೆಗಳಲ್ಲಿ ಅದು ವಿಭಿನ್ನ ಸ್ವರೂಪಗಳಲ್ಲಿ ರಚಿತವಾಗಿದೆಯೆಂದು ತೋರುತ್ತದೆ. ಆಧುನಿಕ ಕವಿಗಳಾದ ಅಮೃತಾಪ್ರೀತಂ (ಪಂಜಾಬಿ), ಬಿಷ್ಣುಡೇ, ಜಿತೇಂದ್ರನಾಥ ಸೇನ್‌ಗುಪ್ತ (ಬಂಗಾಳಿ) ಮುಂತಾದವರು ತಮ್ಮ ತಮ್ಮ ಭಾಷೆಗಳಲ್ಲಿ 'ಬಾರಮಾಸ'ದ ಸಂವಾದಿಗಳನ್ನು ರಚಿಸಿದ್ದಾರೆ. ಎಷ್ಟೋ ಕಡೆ ಅದು ಕೇವಲ ರಾಧಾ-ಕೃಷ್ಣರ ವಿರಹ-ಮಿಲನಗಳಿಗೆ ಸೀಮಿತವಾಗಿಲ್ಲ. ಅಸ್ಸಾಮೀ ಭಾಷೆಯ ಸೀತಾ 'ಬಾರಮಾಹೀ', ಗುಜರಾತಿಯ ಪಾರ್ವತೀ 'ಬಾರ್‌ಮಾಸ', ಹಿಂದಿಯ ಚಂದಾಯಣ ಬಾರಾಮಾಹಿ ಗಳನ್ನು ಹೆಸರಿಸಬಹುದು. ಹಾಗೆಯೇ ಅಸ್ಸಾಮಿಯ 'ಕನ್ಯಾ ಬಾರಾಮಾಹಿ' ಯಲ್ಲಿ

ಸ್ವತಃ ಪತಿಯೇ ಬೇರೊಂದು ವೇಷ ಹಾಕಿಕೊಂಡು ಹೆಣ್ಣನ್ನು ಚಂಚಲಗೊಳಿಸಲು ಪ್ರಯತ್ನಿಸುವ ಪಾತಿವ್ರತ್ಯ ಪರೀಕ್ಷೆಯ ಆಶಯವಿದೆ. ಸಿಂಧಿ ಭಾಷೆಯಲ್ಲಿ, ಅಪವಾದವೋ ಎಂಬಂತೆ ಪ್ರೇಯಸಿಯ ವಿರಹದಿಂದ ಪರಿತಪಿಸುವ ಪ್ರಿಯನ ಸಂವೇದನೆಗಳಿವೆ. ನೇಪಾಳಿಯಲ್ಲಿ ಇವನ್ನು ಸಾಂಚೀಗೀತೆ ಎಂದು ಕರೆಯಲಾಗಿದೆ. 'ಸಾಂಚೀ' ಎಂದರೆ 'ಸಖಿ' ಎಂದು ಅರ್ಥ. ಜೈನ ಹಿನ್ನೆಲೆಯ ಬಾರ್‌ಮಾಸಿಗಳಲ್ಲಿ (ಗುಜರಾತಿ) ರಾಜ್‌ಮತಿ ಮತ್ತು ನೇಮಿನಾಥರು ಕೇಂದ್ರಬಿಂದುಗಳಾಗುತ್ತಾರೆ. ಕೃತಿಯು ನೇಮಿನಾಥನ ವೈರಾಗ್ಯದಲ್ಲಿ ಮುಕ್ತಾಯವಾಗುವುದರಿಂದ ನಾಯಕ-ನಾಯಕಿಯರ ಪುನರ್ಮಿಲನದ ಪ್ರಶ್ನೆ ಅಲ್ಲಿ ಹುಟ್ಟುವುದಿಲ್ಲ.

ಬಾರಾಮಾಹಿಗಳ ವಸ್ತು ಕೂಡ ವಿಪ್ರಲಂಭ ಶೃಂಗಾರ, ಪ್ರಕೃತಿವರ್ಣನೆ, (ಋತುವರ್ಣನೆ) ಜನಜೀವನದ ನೆಲೆಗಳು ಹಾಗೂ ನೀತಿಬೋಧನೆಗಳ ಸಂಯೋಜನೆಯೋ ನಿರೂಪಣೆಯೋ ಆಗಿರುವಂತೆ ತೋರುತ್ತದೆ. ರಾಜಾಸ್ಥಾನಿಯ ಬಾರಾಮಾಹಿಗಳಲ್ಲಿ ಪ್ರತಿ ತಿಂಗಳಿನಲ್ಲೂ ಹೇಗೆ ನಡೆದುಕೊಳ್ಳಬೇಕೆಂಬ ನೀತಿಬೋಧನೆಯ ವಿವರಗಳನ್ನು ನೀಡುವ ಪ್ರಯತ್ನವಿದೆ. ಗುಜರಾತಿಯ'ಶಕ್ತಿ-ಬಾರಾಮಾಹಿ'ಯಲ್ಲಿ ಮಾತೃದೇವತೆಯ ಆರಾಧನೆಯ ಕೇಂದ್ರವಿದ್ದರೆ ಭಕ್ತಿಪರವಲ್ಲದ ಬಾರಾಮಾಸಗಳಲ್ಲಿ ಜೀವಾತ್ಮ ಹಾಗೂ ಪರಮಾತ್ಮರ ಸಂವಾದವು ರೂಪುಗೊಂಡಿರುತ್ತದೆ. ಬಂಗಾಳಿಯಲ್ಲಿ ಪ್ರೇಯಸಿಯು ಬಡತನದಿಂದ ಎದುರಿಸಬೇಕಾಗುವ ಸಮಸ್ಯೆಗಳ ಚಿತ್ರಣವೂ ಇದೆಯಂತೆ.

ಎಲ್ಲ ಸಂದರ್ಭಗಳಲ್ಲಿಯೂ 'ಬಾರಮಾಸ'ವು ಸ್ವತಂತ್ರ ಕೃತಿಯಾಗಿಯೇ ರಚಿತವಾಗಿದೆಯೆಂದು ತೋರುವುದಿಲ್ಲ. ಸುದೀರ್ಘ ಕಾವ್ಯವೊಂದರ ಅಂತ ರಂಗದಲ್ಲಿ 'ಬಾರಮಾಸ'ಗಳನ್ನು ಅವುಗಳ ಛಂದೋರೂಪಕ್ಕೆ ವ್ಯತ್ಯಯ ಬರದಂತೆ ಜೋಡಿಸಿರುವುದಕ್ಕೆ ನಿದರ್ಶನಗಳು ದೊರಕುತ್ತವೆ. ಕನ್ನಡ ಕಾವ್ಯಗಳಲ್ಲೂ ಋತುವರ್ಣನೆ ಬರುತ್ತದೆಯಾದರೂ, ಅಲ್ಲಿ ಬಾರಮಾಸದ ಲಕ್ಷಣಗಳಿರುವುದಿಲ್ಲ. ಆದರೆ ರಾಜಾಸ್ಥಾನಿಯಲ್ಲಿ, ಅದು ಗಣಪತಿ ಕಾಯಸ್ಥನ 'ಮಾಧವಾನಲ ಕಾಮಖಂಡಲ ಪ್ರಬಂಧ'ಎಂಬ ಪ್ರಬಂಧಕಾವ್ಯದ ಭಾಗವಾಗಿ ಬಂದಿದೆ.

ಬಂಗಾಳಿಯಲ್ಲಿ'ಗೀತಿಕಾ' ಮತ್ತು 'ಮಂಗಳ ಕಾವ್ಯ'ವೆಂಬ ಸಾಹಿತ್ಯ ಪ್ರಕಾರಗಳ ಭಾಗವಾಗಿ ಬಾರಾಮಾಹಿ ಕಾಣಿಸಿಕೊಳ್ಳುತ್ತದೆ. ಆದರೆ ಹಿಂದೀ. ಉರ್ದು. ಕನ್ನಡ ಮುಂತಾದ ಭಾಷೆಗಳಲ್ಲಿ ಅದು ಕೇವಲ ಖಂಡ ಕಾವ್ಯಕ್ಕೆ ಸಂವಾದಿಯಾಗಿ ಸ್ವತಂತ್ರ ರೂಪದಲ್ಲಿ ಕಾಣಿಸಿಕೊಂಡಿದೆ.

ಆಕೃತಿಯ ದೃಷ್ಟಿಯಿಂದ ಕೂಡ ವಿವಿಧ ಭಾಷೆಗಳ ಬಾರಮಾಸಗಳಲ್ಲಿ ಏಕರೂಪತೆಯಿಲ್ಲ. ಪಂಜಾಬಿಯಲ್ಲಿ ಹನ್ನೆರಡು ತಿಂಗಳುಗಳನ್ನು ನಿರ್ದೇಶಿಸುವ ಹನ್ನೆರಡು ಸ್ಟಾಂಜಾಗಳು ಮಾತ್ರ ಇರುತ್ತವೆ. ಅವುಗಳನ್ನು ಮಾಜ್ಹ್, ತುಖಾರಿ ಮುಂತಾದ ರಾಗಗಳಿಗೆ ಅಳವಡಿಸಲಾಗಿರುವುದರಿಂದ ಶಾಸ್ತ್ರೀಯ ವೆನ್ನಬಹುದಾದಷ್ಟು ಗೇಯತೆಯ ಪ್ರಮಾಣ ಅಲ್ಲಿರುತ್ತದೆ. ಹಿಂದಿಯಲ್ಲಿ 'ಕಡವಕ್'ಗಳೆಂಬ ಹೆಸರಿನ ಚೌಪದಿಗಳ ಸಮೂಹದ ನಂತರ ದೋಹಾ ಎಂಬ ದ್ವಿಪದಿ ಬರುತ್ತದೆ. ಅಸ್ಸಾಮಿಯಲ್ಲಿ ಅಂತ್ಯಪ್ರಾಸವುಳ್ಳ, ಐವತ್ತೈದು ದ್ವಿಪದಿಗಳ ನೂರಾಹತ್ತು ಸಾಲುಗಳಿರುತ್ತವೆ. ಸಿಂಧಿ ಭಾಷೆಯು ಬಾರಮಾಸದ ಕಲ್ಪನೆಯನ್ನು ಮತ್ತಷ್ಟು ವಿಸ್ತರಿಸಿಕೊಂಡಿದೆ. ಅಲ್ಲಿ ಭಾನುವಾರದಿಂದ ಶನಿವಾರದವರೆಗಿನ ಏಳು ದಿನಗಳ ನೆಲೆಯಲ್ಲಿ ರಚಿತವಾಗಿರುವ 'ಹಫ್ತೊ' ಎಂಬ ಪದ್ಯಬಂಧಗಳಿರುತ್ತವೆ. ತಿಂಗಳಿನ ಮೊದಲ ಹಗಲಿನಿಂದ ಮೂವತ್ತನೆಯ ಹಗಲಿನವರೆಗೆ ಚಲಿಸುವ 'ದಿನ್ಹರ್' ಎಂಬ ರಚನೆಗಳಿರುವಂತೆಯೇ ಮೊದಲ ರಾತ್ರಿಯಿಂದ ಮೂವತ್ತನೆಯ ರಾತ್ರಿಯವರೆಗೆ ಹರಡಿಕೊಂಡಿರುವ 'ರತ್ಯೂಂ' ಎಂಬಂಥ ಪದ್ಯಬಂಧಗಳೂ ಇರುತ್ತವೆ. ವಿರಹ ಮತ್ತು ಪ್ರಕೃತಿ ವರ್ಣನೆಗಳು ಇವೆಲ್ಲದರ ಸಮಾನ ನೆಲೆಗಳು.

೨

ಉರ್ದು ಸೇರಿದಂತೆ ಅನ್ಯ ಭಾರತೀಯ ಭಾಷೆಗಳಲ್ಲಿ 'ಬಾರಮಾಸ'ವೆಂಬ ಪ್ರಕಾರದಲ್ಲಿ ನಡೆದಿರುವ ಕೆಲಸ ಮತ್ತು ಪ್ರಯೋಗಗಳು ಕನ್ನಡ 'ಬಾರಮಾಸ'ದ ರಚನೆ ಹಾಗೂ ಅಧ್ಯಯನಕ್ಕೆ ಹಿನ್ನೆಲೆಯಾಗಿ ಕೆಲಸಮಾಡುವ ಸಾಧ್ಯತೆಯಿದೆ. ಏಕೆಂದರೆ ಸ್ವತಃ ಕನ್ನಡ ಕಾವ್ಯ ಪರಂಪರೆಯಲ್ಲಿಯೇ ಇದಕ್ಕೆ ಸಂವಾದಿಯಾದ ಪ್ರಯತ್ನಗಳಿಲ್ಲ. ಆಕಾರದ ಬಗ್ಗೆ ತಲೆ ಕೆಡಿಸಿಕೊಳ್ಳದೆ ಆಶಯವನ್ನು ಮಾತ್ರ

ಗಮನದಲ್ಲಿಟ್ಟುಕೊಂಡಾಗ ದಕ್ಷಿಣ ಕರ್ನಾಟಕದ ಹಲವು ಜಾವಳಿಗಳಲ್ಲಿ, ದೂತ ಕಾವ್ಯದ ಮಾದರಿಗಳಲ್ಲಿ ಇಂಥ ಸಂವಾದಿಗಳು ದೊರಕುತ್ತವೆ. ಹಾಗೆಯೇ, ಚೌಪದಿಗಳಲ್ಲಿಯೇ ರಚಿತವಾಗಿರುವ ಬೇಂದ್ರೆಯವರ 'ಸಖೀಗೀತ' ಥಟ್ಟನೆ ನೆನಪಿಗೆ ಬರುತ್ತದೆ. 'ಬಂದಿತು ಶ್ರಾವಣ, ಹೃದಯ ವಿದ್ರಾವಣ' ಎನ್ನುವಂಥ ಸಾಲುಗಳು ಯಾವುದೇ'ಬಾರಮಾಸ'ಕ್ಕೆ ಅಲಂಕರಣವಾಗಬಲ್ಲವು. ಪು.ತಿ.ನ. ಅವರ 'ಋತುಗೀತ ಲಹರಿ' ಕೂಡ 'ವಸಂತ ಚಂದನ', 'ವರ್ಷ ಹರ್ಷ', 'ಶರದ್ವಿಲಾಸ' 'ಶಿಶಿರಾಮೋದ' ಮುಂತಾದ ರೂಪಕಗಳಲ್ಲಿ ಶಾಸ್ತ್ರೀಯ ಸಂಗೀತದ ರಾಗಗಳನ್ನೂ ಬಳಸಿಕೊಂಡು ಮಾನವ ಸಂಬಂಧಗಳು ಹಾಗೂ ನಿಸರ್ಗದ ಪಾರಸ್ಪರಿಕ ನೆಲೆಗಳನ್ನು ಶೋಧಿಸುತ್ತದೆ. ಆದರೆ ಕನ್ನಡದ ಈ ಬಾರಮಾಸದ 'ಕಥನಶಿಲ್ಪ'ವಾಗಲೀ ಕಥೆಯಾಗಲೀ ಅಲ್ಲೆಲ್ಲೂ ಬಳಕೆಯಾದಂತಿಲ್ಲ.

ಶಾಂತರಸರು ಸಂಪಾದಿಸಿರುವ ಕಲ್ಲೂರು ಲಿಂಗಣ್ಣವೊಡೆಯನ ಈ ಕೃತಿಯನ್ನು ವಿವರವಾಗಿ ಪರಿಶೀಲಿಸುವ ಕೆಲಸಕ್ಕೆ ಇನ್ನು ಮುಂದೆ ತೊಡಗಬಹುದು. 'ಬಾರಮಾಸ'ವೆಂಬ ಪ್ರಕಾರನಾಮವೇ ಈ ಕೃತಿಯ ಶೀರ್ಷಿಕೆಯೂ ಆಗಿದೆ. ಕವಿ 'ಈ ಪನ್ನಿರ್ವರ ಮಾಸ ವೃತ್ತಪದ' ಎಂಬ ಮಾತನ್ನು ಬಳಸಿರುವನೇ ವಿನಾ 'ಬಾರಮಾಸ' ಎಂಬ ಪದವನ್ನು ಕೃತಿಬಂಧದಲ್ಲಿ ಎಲ್ಲಿಯೂ ಉಪಯೋಗಿಸಿಲ್ಲ. ಇದಕ್ಕೆ ಅನುಬಂಧವಾಗಿರುವ 'ನಿತ್ಯಾನಂದೇಶ್ವರ ಬಾರಮಾಸದ ಪಾರಿಜಾತ'ಕ್ಕೆ ಖಚಿತವಾದ ಶೀರ್ಷಿಕೆಯಾದರೂ ಇದೆ. ಅದರ ೨೪ನೆಯ ಪದ್ಯದಲ್ಲಿ 'ಬಾರಮಾಸ' ಎಂಬ ಹೆಸರೂ ಬಂದಿದೆ. ಆದೇರೀತಿ ಲಿಂಗಣ್ಣವೊಡೆಯನ ಕೃತಿಯಲ್ಲಿ 'ರಾಧಾ' ಎಂಬ ಹೆಸರು ಎಲ್ಲಿಯೂ ಬಂದಿಲ್ಲ. ಕೃಷ್ಣ, ಗೋವಿಂದ, ಮಾಧವ ಮುಂತಾದ ಉಲ್ಲೇಖಗಳು ಪ್ರಿಯಕರನ ಹೆಸರನ್ನು ಖಚಿತಗೊಳಿಸುವ ಹಾಗೆ ಪ್ರೇಯಸಿಯ ಹೆಸರನ್ನು ನಿರ್ದಿಷ್ಟ ಪಡಿಸುವುದಿಲ್ಲ. ರಾಧೆಯು ವಿವಾಹಿತಳೆಂಬ ಪ್ರತೀತಿಯನ್ನು ಗಮನಕ್ಕೆ ತಂದುಕೊಂಡಾಗ ಸಾಂಪ್ರದಾಯಿಕವಾದ ಬಾರಮಾಸದ ಸ್ವರೂಪಕ್ಕೆ ಕೊಂಚ ಧಕ್ಕೆ ಬರುತ್ತದೆ. ಇನ್ನೊಂದು ಇಕ್ಕಟ್ಟೆಂದರೆ, 'ದ್ವಾರಕೆ'ಗೆ ಹೋದ ಕೃಷ್ಣನು ಎಂದೆಂದಿಗೂ ನಂದಗೋಕುಲಕ್ಕೆ ಮರಳಿ ಬರುವುದಿಲ್ಲವೆನ್ನುವುದು. ಹಲವು ಅರ್ಥಗಳಲ್ಲಿ ಅವನದು ಗೋಕುಲನಿರ್ಗಮನವೇ ಸರಿ. ಆದರೆ ಇಲ್ಲಿ 'ಹರಿ ಬರವು'

ಬಾರಮಾಸದ ಕೊನೆಯಲ್ಲಿ ಪುನರ್ಮಿಲನಕ್ಕೆ ಎಡೆಮಾಡಿಕೊಡುತ್ತದೆ. ಆದ್ದರಿಂದಲೇ ಒಟ್ಟು ಕೃತಿಗೆ ಕೃಷ್ಣ-ರಾಧೆಯರ ಸೀಮಿತ ಆಶಯಕ್ಕಿಂತ ಹೆಚ್ಚು ವಿಸ್ತೃತವಾದ, ಸಾರ್ವಕಾಲಿಕವಾದ 'ಪ್ರವಾಸಿ' ಮತ್ತು 'ವಾಸಕ ಸಜ್ಜಿಕೆ'ಯರ ಆಯಾಮ ಪ್ರಾಪ್ತವಾಗುತ್ತದೆ. ಕೃಷ್ಣನಿಗೆ ಸಂಬಂಧಿಸಿದ ಉಲ್ಲೇಖಗಳನ್ನು ಯಾವುದೇ ಪತಿಗೆ ಅಥವಾ ಪ್ರಿಯಕರನಿಗೆ ಅನ್ವಯಿಸಲು ಸಾಧ್ಯವಾದಾಗ 'ಬಾರಮಾಸ' ಮನುಷ್ಯ ಸಂಬಂಧಗಳ ತಾತ್ಕಾಲಿಕ-ಶಾಶ್ವತ ನೆಲೆಗಳಿಗೆ ಹಿಡಿದ ಕನ್ನಡಿಯಾಗುತ್ತದೆ.

ಇಲ್ಲಿ ಗಮನಿಸಬಹುದಾದ, ಕೆಲವು ಸಂಗತಿಗಳನ್ನು ಒಂದೊಂದಾಗಿ ಪರಿಶೀಲಿಸುವುದು ನಿರೂಪಣೆಯ ದೃಷ್ಟಿಯಿಂದ ಸೂಕ್ತ.

೧. ನಿಸರ್ಗವರ್ಣನೆಯ ಸಂಚಾರಿತ್ವ ಮತ್ತು 'ನಾಯಿಕಾ ಭಾವ'ದ ಸ್ಥಾಯಿತ್ವಗಳ ನಡುವೆ ಕೃತಿಯಲ್ಲಿ ದ್ವಂದ್ವ ಏರ್ಪಡುತ್ತದೆ. ವರ್ಷ ಋತುವೇ ಇರಲಿ ವಸಂತವೇ ಇರಲಿ ನಾಯಕಿಯ ವಿರಹಾವಸ್ಥೆಗೆ ಮಾತ್ರ ಚ್ಯುತಿಯಾಗುವುದಿಲ್ಲ. 'ದೂತ' ಕಾವ್ಯಗಳಲ್ಲೂ ಇಂತಹುದೇ ಸನ್ನಿವೇಶ ಏರ್ಪಡುತ್ತದೆ. ಮತ್ತೊಂದು ದ್ವಂದ್ವವೆಂದರೆ ನಾಯಕಿಯ ಮನಃಸ್ಥಿತಿಗೂ ಅವಳ ಸುತ್ತಲಿನ ಸಮುದಾಯದ ಇತರರ ಮನಃಸ್ಥಿತಿಗೂ ಇರುವ ಅಂತರಗಳು. ಅವಳು ವಿರಹದ ವಿಷಾದದಲ್ಲಿ ಮಗ್ನಳಾಗಿರುವಾಗ ಅವರು ಆಯಾ ಋತುವಿಗೆ ಅನುಗುಣವಾದ ಚಟುವಟಿಕೆಗಳಲ್ಲಿ ಮಗ್ನರಾಗಿರುತ್ತಾರೆ.

೨. ಪ್ರತಿಯೊಂದು ತಿಂಗಳಿನ ವರ್ಣನೆಯಲ್ಲೂ ಮೂರು ಘಟಕಗಳಿವೆ. ಆ ಘಟಕಗಳ ನಡುವೆ ಪರಸ್ಪರ ಸಂಬಂಧವಿರುವ ಹಾಗೆಯೇ, ಬೇರೆ ಬೇರೆ ತಿಂಗಳುಗಳ ಅದೇ ರೀತಿಯ ಘಟಕಗಳ ನಡುವೆಯೂ ಸಾತತ್ಯದ ಸಂಬಂಧವಿದೆ. ಎಂದರೆ ಪ್ರತಿಯೊಂದು ತಿಂಗಳಿನ ವರ್ಣನೆಯ ಮೊದಲಿನಲ್ಲಿ ಬರುವ ಮಾಲಿನೀ ವೃತ್ತಗಳನ್ನು ಒಟ್ಟಾಗಿ ಓದಿಕೊಳ್ಳ ಬಹುದು. ಆ ಘಟಕವು ಆಯಾ ತಿಂಗಳಿನ ನಿಸರ್ಗದ ವಿವರಗಳಿಗೆ ಸೀಮಿತವಾಗಿರುವುದು ನಮ್ಮ ಗಮನಕ್ಕೆ ಬರುತ್ತದೆ. ಅದೇ ರೀತಿ ಪ್ರತಿ

ತಿಂಗಳಿನಲ್ಲಿ ಎರಡನೆಯದಾಗಿ ಬರುವ ಶಾರ್ದೂಲ ಅಥವಾ ಮತ್ತೇಭ ವಿಕ್ರೀಡಿತ ವೃತ್ತಗಳು ನಾಯಕಿಯ ವಿರಹ ಸ್ಥಿತಿಯ, ಹಾಗೂ ಕ್ಷಣಕ್ಷಣಕ್ಕೂ ಬದಲಾಗುವ ಭಾವನೆಗಳ ನಿರೂಪಣೆಗೆ ಮೀಸಲಾಗಿವೆ. ಈ ವೃತ್ತಗಳ ಸರಣಿಯಲ್ಲಿ ಅವಳ ವಿಷಾದದೊಂದಿಗೆ ಆತ್ಮವಿಶ್ವಾಸವೂ ಮಿಳಿತ ವಾಗಿರುವುದನ್ನು ನಾವು ಗಮನಿಸಬಹುದು. ಕೃಷ್ಣ ಬರದಿರುವುದರಿಂದ ತನಗೆ ಏನಾಗಿದೆ, ಅವನು ಹಿಂದಿರುಗಿದಾಗ ತಾನು ಹೇಗೆ ಸೇಡು ತೀರಿಸಿ ಕೊಳ್ಳುತ್ತೇನೆ ಎನ್ನುವುದನ್ನು ಅವಳು ಪದೇ ಪದೇ ಹೇಳುತ್ತಾಳೆ. ಕೃಷ್ಣನು ತನಗೆ ಹೆದರಿ ಮರ ಹತ್ತುವಂತೆ, ತಲೆ ತಗ್ಗಿಸುವಂತೆ ಮಾಡುತ್ತೇನೆ ಎನ್ನುವುದು ಅವಳ ಪ್ರತಾಪ :

'ಅವನೇ ಬಂದೊಡೆ ಕಣ್ಣ ಮುಚ್ಚದವೊಲುಂ ಮಾಳ್ಪೆಂ'.......(ಪದ್ಯ ೧೦)
'ತನ್ನಾ ಮೋರೆ ನೆಲಕ್ಕೆ ತಗ್ಗಿಸುವವೋಲೆ ನಾ ಮಾಳ್ಪೆ ಕೃಷ್ಣಂ ಬರೇ'.......(ಪದ್ಯ ೧೬)
'ಪಲ್ಲಂದೋರುವವೊಲಾನು ಮಾಡದಿಹನೇ ಪುಲ್ಲಾಂಬಕಂ ಬಂದಡೆ'.........(ಪದ್ಯ ೧೯)
'ಹಿಂಬರಲ್ ತಾನುಟ್ಟುದಂ ಜಾರ್ವವೋಲ್ ತರುಣೀ ಮಾಡದಡಾನು ಹೆಣ್ಣೆ'.......(ಪದ್ಯ ೩೪)

ಹೆಚ್ಚು ಕಡಿಮೆ ಪ್ರತಿ ಪದ್ಯದಲ್ಲೂ ಹೀಗೆ ಜಂಬಕೊಚ್ಚಿಕೊಳ್ಳುವ ನಾಯಕಿಯು, ಪ್ರಿಯಕರ ಬಂದಾಗ ಇದಾವುದನ್ನೂ ಮಾಡದೆ ಹರ್ಷೋನ್ಮತ್ತಳಾಗಿ ಶರಣಾಗತಳಾಗುತ್ತಾಳೆ. ಇದು ಹೆಣ್ಣಿನ ಮನೋವ್ಯಾಪಾರಗಳನ್ನು ಗಂಡೊಬ್ಬನು ವರ್ಣಿಸುವ ಕಾವ್ಯವೆಂಬುದನ್ನು ನೆನಪಿಗೆ ತಂದುಕೊಂಡಾಗ ಈ ಧೋರಣೆಗೆ ಸಮರ್ಥನೆ ಸಿಗಬಹುದು.

ಪ್ರತಿ ಮಾಸಿಕ ಘಟಕದಲ್ಲೂ, ಮೂರನೆಯದಾಗಿ, ಜಾನಪದಕ್ಕೆ ಸಮೀಪ ವಾದ 'ಪದ'ವೊಂದು ಬರುತ್ತದೆ. ಈ ಸರಣಿಯು ಆಯಾ ಋತುವಿಗೆ ಹಾಗೂ ಪ್ರದೇಶಕ್ಕೆ ಅನುಗುಣವಾದ ಸಂಪ್ರದಾಯಗಳನ್ನು, ಹಬ್ಬಹರಿದಿನಗಳನ್ನು ವಿವರಿಸುತ್ತದೆ. ಪ್ರತಿಯೊಂದರ ಕೊನೆಯಲ್ಲೂ ತನಗೆ ಈ ಆಚರಣೆಗಳಲ್ಲಿ ಪಾಲುಗೊಳ್ಳಲು ಸಾಧ್ಯವಾಗುತ್ತಿಲ್ಲವಲ್ಲಾ ಎಂಬ ವಿಷಾದವಿದೆ.'ಬಾರಮಾಸ'ದ ಈ ಭಾಗವು ಕ್ರಮೇಣ ಲುಪ್ತವಾಗುತ್ತಿರುವ ಅಥವಾ ಅಪರಿಚಿತವಾಗಿದ್ದ ಪ್ರಾದೇಶಿಕ ಸಂಸ್ಕೃತಿಯ .ವಿವರಗಳ ಲೋಕಕ್ಕೆ ಬಾಗಿಲು ತೆರೆಯುತ್ತದೆ. ಇದರಿಂದ

ಸಾಧ್ಯವಾಗುವ ಜಾನಪದ ಸಾಂಸ್ಕೃತಿಕ ಅಧ್ಯಯನದ ಆಯಾಮಗಳು ಕೃತಿಯ ಮಹತ್ವವನ್ನು ಹೆಚ್ಚಿಸಿದೆ. ಈ ಆಯಾಮಗಳನ್ನು ಶಾಂತರಸರು ಅನುಬಂಧದಲ್ಲಿ ತುಂಬ ಉಪಯುಕ್ತವಾಗಿ. ಹೆಚ್ಚಿನ ವಿವರಗಳೊಂದಿಗೆ ನಿರೂಪಿಸಿದ್ದಾರೆ. ಎಲ್ಲ ಪ್ರದೇಶಗಳಿಗೂ ಸಮಾನವಾಗಿರುವುದರಿಂದಲೇ ಏಕತಾನವಾಗಬಹುದಾಗಿದ್ದ ನಿಸರ್ಗ ವಿವರಗಳು. ಪ್ರಾದೇಶಿಕ ಸಂಸ್ಕೃತಿಯ ಛಾಪನ್ನು ಪಡೆಯುವುದರಿಂದ ಅನನ್ಯವಾಗುತ್ತವೆ.

೩. ಈ 'ಬಾರಮಾಸ'ದ ಜಾನಪದೀಯತೆ ಹಾಗೂ ಶಿಷ್ಟತೆಗಳ ಪರಿಶೀಲನೆಯು ಕೆಲವು ಕುತೂಹಲಕಾರಿಯಾದ ಅಂಶಗಳನ್ನು ತಿಳಿಸುತ್ತದೆ. ಬಾರಮಾಸ ಇತರ ಭಾಷೆಗಳಲ್ಲಿ ಜಾನಪದ ಮತ್ತು ಶಿಷ್ಟಗಳೆರಡರಲ್ಲೂ ರಚಿತವಾಗಿದೆ. ಗಿರಿಜನರ ಹಟ್ಟಿಗಳಿಂದ ಹಿಡಿದು ಆಧುನಿಕ ಕವಿಗಳವರೆಗೆ ವಿವಿಧ ಸನ್ನಿವೇಶಗಳಲ್ಲಿ ಇದು ಅವತರಿಸಿದೆ. ಕನ್ನಡ 'ಬಾರಮಾಸ'ವು ತನ್ನ ಆಶಯದಲ್ಲಿ ಜಾನಪದೀಯತೆಯನ್ನೂ ಆಕೃತಿಯಲ್ಲಿ ಮಾರ್ಗಕಾವ್ಯದ ನೆಲೆಗಳನ್ನೂ ಮೈಗೂಡಿಸಿಕೊಂಡಿದೆ. ಇಡೀ ಪರಿಸರವೇ ಗ್ರಾಮೀಣ ವಾದುದು. ಹದಿನೇಳನೆಯ ಶತಮಾನದ ರಾಯಚೂರು ಪ್ರದೇಶದ.'ಕರಣಿ. ಬಿಜ್ಜಣ. ಕಂಸಪಾತ್ರೆ. ಗುಡಯುಕ್ತ ಹೋಳಿಗೆ. ಪುಷ್ಪಮಾಲೆ. ರಂಗವಾಲಿ. ಕೂಷ್ಮಾಂಡದಾನ. ನಿತ್ಯ ಸ್ನಾನ'ಗಳು ಇಂಥ ವಿವರಗಳು.

ಆದರೆ ಆಕೃತಿಯಲ್ಲಿ ಈ 'ಬಾರಮಾಸ'ವನ್ನು ಜಾನಪದವೆಂದು ಕರೆಯುವುದು ಕಷ್ಟ. ಮಾಲಿನೀ. ಮತ್ತೇಭ. ಶಾರ್ದೂಲ ಮುಂತಾದ ವೃತ್ತಗಳು 'ಚಂಪೂ ವಿಶಿಷ್ಟ ವಾಚನಕ್ರಮ'ಕ್ಕೆ ಒಲಿಯುತ್ತವೆಯೇ ವಿನಾ ಗೇಯತೆಗಲ್ಲ. ನನ್ನ ಗುರುಗಳಾದ ಶ್ರೀ ಎಸ್. ಆರ್. ಮಳಗಿಯವರು ಈ ವೃತ್ತಗಳನ್ನು ವಾಚನ ಮಾಡುವುದನ್ನು ಕೇಳಿದವನು ನಾನು. ಹಾಗೆಯೇ ಹಿರಿಯರಾದ ಕೀರ್ತಿಶೇಷ ಸಿದ್ಧರಾಮ ಜಂಬಲದಿನ್ನಿಯವರು ಹರಿಹರನ ಶತಕಗಳನ್ನು ಭಾವಭರಿತವಾಗಿ ಓದಿದ್ದು ನನಗೆ ನೆನಪಿದೆ. ಶಾಂತರಸರಾದರೋ ಇದರ ಹಾಡುಗಾರಿಕೆಯನ್ನು ತಾವು ಕೇಳಿರುವೆವೆಂದು ಹೇಳುತ್ತಾರೆ. ಆದರೆ ಇವು ಹಳ್ಳಿಯ ಹಾಡುಗಾರಿಕೆಗೆ ಒಗ್ಗುವ

ಬಗೆ ನನಗೆ ಮನದಟ್ಟಾಗುವುದಿಲ್ಲ. ದ್ರಾವಿಡಮೂಲದ ಜಾನಪದ ಕೃತಿಗಳಲ್ಲಿ ಇದರ ಆಕರವಿಲ್ಲವಾದ್ದರಿಂದ, ಅದರ ಹಾಡುಗಾರಿಕೆ ಹಿಂದಿ ಅಥವಾ ಉರ್ದುವಿನಿಂದ ಪ್ರಭಾವಿತವಾದ ಹೈದರಾಬಾದ್ ಕರ್ನಾಟಕದಲ್ಲಿ ಮಾತ್ರವೇ ಸಾಧ್ಯವಿರಬಹುದೆಂಬ ತೀರ್ಮಾನಕ್ಕೆ ಬರಲು ಸಾಧ್ಯವಿದೆ. ಉಪಭಾಷೆಯ ವಿವರಗಳಂತೂ ಇದರಿಂದ ಸಿಗುವುದು ಕಷ್ಟ. ಹಾಗೆಂದು ಪಂಪ ರನ್ನರ ಹಳೆಗನ್ನಡವೂ ಇಲ್ಲಿ ಅನುಪಲಬ್ಧ.

ಆದರೆ ಛಂದೋಬಂಧಗಳು ಪದಗಳ ಆಯ್ಕೆಯ ಮೇಲೆ ಒಡ್ಡುವ ಆಯ್ಕೆಯ ಅನಿವಾರ್ಯತೆಗಳಿಂದಲೇ, ಪ್ರತಿ ತಿಂಗಳಿಗೆ ಸಂಬಂಧಪಟ್ಟ ಮೊದಲ ಎರಡು ಪದ್ಯಗಳು ಹಳೆಗನ್ನಡ ಚೌಕಟ್ಟನ್ನು, ಕೊನೆಗೆ ಪದವು ನಡುಗನ್ನಡ ಶಬ್ದಕೋಶದ ಬಾಹುಳ್ಯವನ್ನು ಒಳಗೊಂಡಿರುವುದನ್ನು ನೋಡಬಹುದು. ಒಂದೇ ಪದ್ಯದ ಆಕೃತಿಯೊಳಗೆ ಕನ್ನಡದ ಎರಡು ನೆಲೆಗಳು ಪರಸ್ಪರ ಮಿಳಿತವಾಗಿರುವ ಇದು ಅಪರೂಪದ ಸಂದರ್ಭವೇ ಸರಿ.

೪. ಈ ಕೃತಿಯ ಸಾಹಿತ್ಯಕ ಗುಣದ ಬಗ್ಗೆ ಹೇಳಬಹುದಾದ ಒಳ್ಳೆಯ ಮಾತುಗಳನ್ನೂ ಶಾಂತರಸರೇ ಹೇಳಿದ್ದಾರೆ. ನಿಶ್ಚಿತವಾದ ಭಾಷಿಕ ಪರಂಪರೆಯೊಂದರ ಭಾಗವಾಗಿ ಬಂದ ಅಥವಾ ತನ್ನದೇ ಆದ ಪರಂಪರೆಯನ್ನು ರೂಪಿಸಿಕೊಳ್ಳದ ಕೃತಿಯೊಂದನ್ನು ಬೆಲೆಕಟ್ಟುವುದು ಕಷ್ಟವೇ ಸರಿ. ಹೀಗಾದಾಗ ಕನ್ನಡದ ಋತುವರ್ಣನೆಗಳೋ, ಹರಿದಾಸ ಸಾಹಿತ್ಯದ ಪ್ರಮುಖನೆಲೆಯಾಗಿದ್ದ ರಾಯಚೂರು ಪ್ರದೇಶದ ಭಾಷಿಕ ಪ್ರಯೋಗಗಳೋ ನಮ್ಮ ಮಾನದಂಡವಾಗುತ್ತದೆ. ಆದರೆ ಒಂದು ಮಾತಂತೂ ನಿಜ. ಅತ್ತ ಮಹಾಕಾವ್ಯವೂ ಅಲ್ಲದ, ಇತ್ತ ಜನಪದ ಗೀತೆಯೂ ಅಲ್ಲದ ಭಾವಗೀತೆಗೆ ಸಮೀಪವಾದ ಪರಂಪರೆಯೊಂದರ ಪೂರ್ವಾಧಿಕಾರಿಗಳನ್ನು ಇಲ್ಲಿ ಗುರುತಿಸಬಹುದು. ಸೂಕ್ಷ್ಮವಾಗಿ ಪರಿಶೀಲಿಸಿದರೆ ಮಾಲಿನೀವೃತ್ತಗಳ ಸರಣಿಯ ನಿರೂಪಕನು ಕವಿಯೆಂದೂ, ಉಳಿದ ಪದ್ಯಗಳು ನಾಯಕಿಯ ಮಾತುಗಳೆಂದೂ ಗೊತ್ತಾಗುತ್ತದೆ. ಎರಡನೆಯ ಗುಂಪಿನ ಪದ್ಯಗಳಲ್ಲಿ ಮಾತ್ರ ಉತ್ತಮಪುರುಷ ನಿರೂಪಣೆಯಿದೆ.

ಆದ್ದರಿಂದ ಎಲ್ಲ ಪದ್ಯಗಳನ್ನು ನಾಯಕಿಯೇ ಹೇಳಿದ್ದೆಂದು ತೀರ್ಮಾನಿಸುವುದು ತಪ್ಪಾಗುತ್ತದೆ. ಹೀಗೆ ಮಾಡುವುದರಿಂದ ಕವಿಯು. ನಿಸರ್ಗವರ್ಣನೆಯಲ್ಲಿ ವಸ್ತುನಿಷ್ಠತೆಯನ್ನು ಉಳಿದಂತೆ ವೈಯಕ್ತಿಕತೆಯನ್ನು ಸಾಧಿಸಿದ್ದಾನೆ.

ಇಷ್ಟನ್ನು ಹೊರತುಪಡಿಸಿದರೆ, ಮತ್ತೆ ಮತ್ತೆ ಓದಿಸಿಕೊಳ್ಳುವ ಸಾಹಿತ್ಯಗುಣವೇನೂ ಇಲ್ಲಿ ಕಂಡುಬರುವುದಿಲ್ಲ. ಮೌಖಿಕ ಸಂವಹನದ ಸನ್ನಿವೇಶವನ್ನು ಮೀರಿಯೂ ಮೌಖಿಕವಾಗಿ ಉಳಿದುಕೊಳ್ಳುವ ತಾಳಿಕೆಯ ಗುಣ ಈ ಬಾರಮಾಸಕ್ಕೆ ಇದೆಯೆಂದು ಹೇಳುವುದು ಕಷ್ಟ. ಗೇಯತೆಯ ನೆಲೆಯಲ್ಲಿಯೇ ಪ್ರಚಲಿತವಾಗಿ ಉಳಿಯುವ ಅವಕಾಶವನ್ನು ಇಂಥ ಕೃತಿಗಳು ತಮ್ಮ ಸಂಕೀರ್ಣ 'ವೃತ್ತಬಂಧ'ದ ಫಲವಾಗಿ ಕಳೆದುಕೊಂಡಿವೆ. ಕಿರುಗಾತ್ರದ ಕಥನಶಿಲ್ಪ ಹಾಗೂ ಖಚಿತವಾದ 'ಧಾರ್ಮಿಕತೆ'ಯ ಅಭಾವ ಕೂಡ ಇದರ ಪ್ರಾಚುರ್ಯವು ಕಡಿಮೆಯಾಗಲು ಕಾರಣವಾಗಿದೆ. ಹೀಗೆಂದ ಮಾತ್ರಕ್ಕೆ ಇಂಥ ಕೃತಿಗಳಿಗೆ ಸಾರ್ಥಕತೆಯಿಲ್ಲವೆಂದು ಅರ್ಥವಲ್ಲ. ಇಂದಿನ ಗಿಡಗಳು ನಾಳಿನ ಬೀಜಗಳಲ್ಲಿ ಕರಗಿಹೋಗಿ ಮತ್ತೆಂದೋ ಹೊಸಹುಟ್ಟಿಗೆ ಕಾರಣವಾಗುವುದು ಸಾಹಿತ್ಯದ ಚಲನೆಯ ಸಹಜರೀತಿ. ಅದಲ್ಲದೆಯೂ ಈ ಬಾರಮಾಸವು ಆಸಕ್ತ ಸಾಹಿತ್ಯದ ವಿದ್ಯಾರ್ಥಿಗಳಿಗೆ ಹಾಗೆಯೇ ಸಾಹಿತ್ಯಕೃತಿಗಳನ್ನು ಆಕರವಾಗಿ ಬಳಸಿಕೊಂಡು. ಸಂಸ್ಕೃತಿಯ ನೆಲೆಗಳನ್ನು ಗ್ರಹಿಸ ಬಯಸುವ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವುದರಲ್ಲಿ ಸಂಶಯವಿಲ್ಲ.

ಕೊನೆಯದಾಗಿ ಈ ಕೃತಿಯ ಸಂಪಾದನ ಕಾರ್ಯ ಮತ್ತು ನಿರ್ಮಾಣಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವುದು ನನ್ನ ಸಂತೋಷದ ಕರ್ತವ್ಯ. ಶಾಂತರಸರು ಗ್ರಂಥಸಂಪಾದನ ಕಾರ್ಯದಲ್ಲಿ ನುರಿತವರಂತೆ. ಪ್ರೀತಿ ಮತ್ತು ಶ್ರದ್ಧೆಗಳಿಂದ ಈ ಕೆಲಸವನ್ನು ನಿರ್ವಹಿಸಿದ್ದಾರೆ. ಹಸ್ತಪ್ರತಿಗಳನ್ನು ಸಂಗ್ರಹಿಸುವುದರಿಂದ ಹಿಡಿದು ಲಿಂಗಣ್ಣವೊಡೆಯನ ಸ್ಥಳ. ಕಾಲ. ಜೀವನ ಮುಂತಾದ ಸಂಗತಿಗಳ ಬಗೆಗೆ ತಲಸ್ಪರ್ಶಿಯಾದ ಸಂಶೋಧನೆ ನಡೆಸುವುದರ ವರೆಗೆ ಅವರ ಆಸಕ್ತಿಯ

ಹರಹಿದೆ. ಇಷ್ಟಕ್ಕೇ ಸೀಮಿತವಾಗಿದ್ದರೆ ಅವರು ಸಾಂಪ್ರದಾಯಿಕ ಗ್ರಂಥಸಂಪಾದನೆಯ ಯಾಂತ್ರಿಕ ಮಿತಿಗಳಿಂದ ಬಿಡುಗಡೆ ಪಡೆಯುತ್ತಿರಲಿಲ್ಲ. ಆದರೆ ತಾವು ಮಾಡುತ್ತಿರುವ ಕೆಲಸದ ಸಾಂಸ್ಕೃತಿಕ ಆಯಾಮಗಳ ಬಗೆಗೆ ನಿಖರವಾದ ತಿಳುವಳಿಕೆಯುಳ್ಳ ಶಾಂತರಸರು ತಮ್ಮ ಪ್ರಸ್ತಾವನೆಯಲ್ಲಿ, ಗತಕಾಲದ ಜನಜೀವನಲೋಕದ ಬಾಗಿಲುಗಳನ್ನು ತೆರೆಯುವ ಅಂಥ ವಿವರಗಳ ಕಡೆಯೂ ವಿಶೇಷ ಗಮನ ಹರಿಸಿದ್ದಾರೆ. ವಿಭಿನ್ನ ಧಾರ್ಮಿಕ ನಂಬಿಕೆಗಳ ಜನರ ನಡುವಿನ ಆತ್ಮೀಯ ಸಹಜೀವನದ ಸಾಧ್ಯತೆಗಳಿಗೆ ಹಿಡಿದ ಕನ್ನಡಿಯಾಗಿ ಅವರು ಈ ಕೃತಿಯನ್ನು ಗ್ರಹಿಸುತ್ತಾರೆ. ಅಷ್ಟೇ ಅಲ್ಲ. ತಮ್ಮದೇ ಬದುಕಿನ ವಿವರಗಳಿಂದ ಇಂಥ ವಾಸ್ತವತೆಯು ನಿಜವೆಂಬ ಪುರಾವೆಗಳನ್ನು ಒದಗಿಸುತ್ತಾರೆ. ಈ ರೀತಿಯ ಅನಿಸಿಕೆಗಳಲ್ಲಿ ಆಶಾಚಿಂತನೆ, ಹಳಹಳಿಕೆ ಮತ್ತು ಆದರ್ಶವಾದಗಳು ಸಮಪ್ರಮಾಣದಲ್ಲಿ ಬೆರೆತಿರುತ್ತವೆ.'ಶಾಂತಿಯುತ ಸಹಜ ಜೀವನ'ವು ಆಯ್ಕೆಯೋ, ಅನಿವಾರ್ಯವೋ ಎನ್ನುವುದು ಹತ್ತು ಹಲವು ಸಂಗತಿಗಳಿಂದ ನಿರ್ಧಾರಿತವಾಗುತ್ತದೆ.

ಈ 'ಬಾರಮಾಸ'ದ ಬೇರೆ ಹಸ್ತಪ್ರತಿಗಳು ಸಿಕ್ಕಾಗ,(ಸಿಕ್ಕರೆ) ಕೆಲವು ಪಾಠಗಳು ತಿದ್ದುಪಡಿಯಾಗುವ ಸಂಭವ ಇದೆಯೆಂದು ಹೇಳುವುದನ್ನು ಬಿಟ್ಟರೆ ಗ್ರಂಥಸಂಪಾದನೆಯ ಬಗ್ಗೆ ನಾನು ಹೇಳಬೇಕಾದುದೇನೂ ಇಲ್ಲ. ವೈಯಕ್ತಿಕವಾಗಿ ನನಗೆ ಆ ಕ್ಷೇತ್ರದಲ್ಲಿ ಪರಿಶ್ರಮವೂ ಇಲ್ಲ.

ಈ ಪುಸ್ತಕದಲ್ಲಿ ಬಂದಿರುವ ವರ್ಣಚಿತ್ರಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬೇಕು. ಕನ್ನಡ ವಿಶ್ವವಿದ್ಯಾಲಯವು ತನ್ನ ಹೆಮ್ಮೆಯ ಪ್ರಕಟಣೆಯಾದ 'ಶ್ರೀತತ್ವನಿಧಿ'ಯಲ್ಲಿ ಸಂಗೀತ ಹಾಗೂ ಚಿತ್ರಕಲೆಗಳು ಸಂಯೋಜಿತವಾಗಿರುವ ಬಗೆಯೊಂದನ್ನು ಪ್ರಚುರಪಡಿಸಿತ್ತು. ಇಲ್ಲಿ ಮತ್ತೆ 'ಬಾರಮಾಸ'ದ ಋತುವರ್ಣನೆಗಳಿಗೆ ಹೊಂದಿಕೆಯಾಗುವಂಥ ವರ್ಣಚಿತ್ರ ಮತ್ತು ಕಪ್ಪು-ಬಿಳುಪುಗಳನ್ನು ಅಳವಡಿಸಿಕೊಳ್ಳಲಾಗಿದೆ. ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ವಿಶೇಷ ಪರಿಣತಿ ಪಡೆದಿರುವ ಕಲಾವಿದರಾದ ಶ್ರೀ ವಿಜಯ

ಹಾಗರಗುಂಡಗಿಯವರು ಪ್ರಾಚೀನ ಕೃತಿಯಾದ' ಬಾರಮಾಸ'ದ ಆಶಯಗಳನ್ನು ಗ್ರಹಿಸಿಕೊಂಡು ಈ ಚಿತ್ರಗಳನ್ನು ಸೃಷ್ಟಿಸಿದ್ದಾರೆ.

ಈ ಕ್ಷೇತ್ರದಲ್ಲಿ ಅಜ್ಞನಾದ ನನಗೆ, ಮುನ್ನುಡಿ ಬರೆಯುವ ಗೌರವವನ್ನು ಶ್ರೀ ಶಾಂತರಸರು ಪ್ರೀತಿಯಿಂದ ಕೊಟ್ಟಿದ್ದಾರೆ. ಅವರಿಂದ ನನಗೆ ಇವೆಲ್ಲದರ ಬಗ್ಗೆ ಓದುವ ಅವಕಾಶ ದೊರೆಯಿತು. ಇದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳನ್ನು ತಿಳಿಸುತ್ತಾ ಈ ಕೆಲವು ಮಾತುಗಳನ್ನು ಮುಕ್ತಾಯ ಮಾಡುತ್ತೇನೆ.

ಕನ್ನಡ ವಿಶ್ವವಿದ್ಯಾಲಯ **ಎಚ್.ಎಸ್. ರಾಘವೇಂದ್ರರಾವ್**
ಹಂಪಿ

# ಪರಿವಿಡಿ


ಮುನ್ನುಡಿ / vii

ಸಂಪಾದನ - ಸಂಸ್ಕರಣ - ನಮನ / ೧

ಪ್ರಸ್ತಾವನೆ / ೧೨

ಬಾರಮಾಸ / ೫೧

ಅನುಬಂಧಗಳು / ೮೫

# ಸಂಪಾದನ - ಸಂಸ್ಕರಣ - ನಮನ

೧೯೬೪ ರಲ್ಲಿ ಡಾ. ಕೆ. ಮುದ್ದಣ್ಣ, ಪಂಡಿತ ಸೂಗವೀರ ಶರ್ಮ, ಉಮಾಪತಿ ಚುಕ್ಕಿ, ಚೆನ್ನಬಸವಪ್ಪ ಬೆಟ್ಟದೂರು, ವೀರಣ್ಣಗೌಡ ನೀರಮಾನ್ವಿ, ನಾನು ಮತ್ತು ಇತರ ಸ್ನೇಹಿತರು ಕೂಡಿ, 'ಅನುಭವ ಮಂಟಪ' ವೆಂಬ ಸಂಸ್ಥೆಯನ್ನು ಸ್ಥಾಪಿಸಿದೆವು. ಹಳೆಯ ಮತ್ತು ಹೊಸ ಸಾಹಿತ್ಯಗ್ರಂಥಗಳನ್ನು ಪ್ರಕಟಿಸುವುದು, ವಿದ್ವಜ್ಜನರ ಭಾಷಣಗಳನ್ನು ಏರ್ಪಡಿಸುವದು, ಕಲೆಯ ಅಭಿವೃದ್ಧಿ ಮತ್ತು ಪ್ರದರ್ಶನ, ತಾಳವೋಲೆ ಮತ್ತು ಮುದ್ರಿತ ಗ್ರಂಥಗಳನ್ನು ಸಂಗ್ರಹಿಸುವುದು, ಗ್ರಂಥಗಳ ಸಂಶೋಧನೆ ಮತ್ತು ಸಂಸ್ಕರಣ - ಮುಂತಾದ ಕಾರ್ಯಗಳು ಅನುಭವ ಮಂಟಪದ ಉದ್ದೇಶಗಳಾಗಿದ್ದವು. ಈ ನಿಟ್ಟಿನಲ್ಲಿ ಕಾರ್ಯನಡೆದು ಹಳೆಯ ಹಸ್ತಪ್ರತಿ, ತಾಳವೋಲೆ ಪ್ರತಿಗಳ ಸಂಗ್ರಹ ನಡೆಯಿತು. ೧೯೬೪ರಲ್ಲಿ 'ಮಲ್ಲಿಗೆ ಮಾಲೆ' ಎಂಬ ಚಿಕ್ಕ ಕವನ ಸಂಕಲನದಲ್ಲಿ ಕಲ್ಲೂರಿನ ಲಿಂಗಣ್ಣ ಕವಿಯ ವರರಮ್ಯರತ್ನಾಕರ, ಗಣೇಕಲ್ಲಿನ ಸಂಗವಿಭು ಕವಿಯ ಕುಮಾರ ವಿಜಯ ಮತ್ತು ಕೊಂಡಲಗಿರಿಯ ರಸಿಕಮನೋರಂಜನ ಮಹಾಪ್ರಬಂಧ - ಈ ಕಾವ್ಯಗಳಿಂದ ಕೆಲವು ಪದ್ಯಗಳನ್ನು ಆಯ್ಕೆಮಾಡಿ ಕವಿಚರಿತೆಯೊಂದಿಗೆ ಪ್ರಕಟಿಸಿದೆವು. ಅದೇ ಕಾಲಕ್ಕೆ ಬಾರಮಾಸ ಕಾವ್ಯದ ಚರ್ಚೆಯೂ ನಡೆಯಿತು. ಒಂದೆರಡು ವರ್ಷಗಳಲ್ಲಿ ಅನುಭವ ಮಂಟಪದ ಕಾರ್ಯ ಸ್ಥಗಿತಗೊಂಡಿತು. ಸಂಗವಿಭುವಿನ ಶತಕಗಳನ್ನು ಬ್ಯಾಗವಾಟದ ಚೆನ್ನಬಸವ ಶಾಸ್ತ್ರಿಗಳು ಮತ್ತು ನಾನು ಸಂಗ್ರಹಿಸಿ ಪ್ರಕಟಿಸಿದೆವು. ಅದೇ ಕಾಲಕ್ಕೆ ಬಾರಮಾಸ ಮತ್ತು ವರರಮ್ಯ ರತ್ನಾಕರ ಕಾವ್ಯಗಳು ಪ್ರಕಟವಾಗಬೇಕಿತ್ತು. ಮುಂದೆ ನಾನು ನನ್ನ ಸ್ವಂತ ಪ್ರಕಟನೆಯಾದ ಸತ್ಯಸ್ನೇಹ

ಪ್ರಕಾಶನದಿಂದ ವಿಸ್ತಾರವಾದ ಪ್ರಸ್ತಾವನೆಯಿಂದ ಮತ್ತು ಹೆಚ್ಚು ಅಡಿಟಿಪ್ಪಣಿಗಳಿಂದ ಸಂಗವಿಭುವಿನ ಮೂರು ಶತಕಗಳನ್ನು[೧] ೧೯೭೭ರಲ್ಲಿ ಪ್ರಕಟಿಸಿದೆ. ಬಾರಮಾಸ ಆಗ ಪ್ರಕಟವಾಗಿದ್ದರೆ ಸಂಗವಿಭುವಿನಂತೆ, ಲಿಂಗಣ್ಣ ಕವಿಯು ಇಷ್ಟೊತ್ತಿಗೆ ಕರ್ನಾಟಕದ ತುಂಬ ಹೆಸರು ಗಳಿಸುತ್ತಿದ್ದ.

ಈಗ ಎರಡು ವರ್ಷಗಳ ಹಿಂದೆ ಕಲ್ಲೂರಿನ ಶ್ರೀ ವಿ.ಆರ್. ಪಾಟೀಲರು (ಎಡಿಷನಲ್ ಕಮಿಷನರ್, ವಾಣಿಜ್ಯ ತೆರಿಗೆ ಇಲಾಖೆ) ಬೆಂಗಳೂರಿನಲ್ಲಿ ಕಂಡಾಗ ಬಾರಮಾಸ ಕಾವ್ಯವನ್ನು ಸಂಪಾದನೆ ಮಾಡಿಕೊಡಬೇಕೆಂದು ಕೇಳಿದರು. ಶ್ರೀ ಪಾಟೀಲರ ಒಲುಮೆಯ ಒತ್ತಾಯಕ್ಕೆ ನಾನೀ ಕೆಲಸವನ್ನು ಒಪ್ಪಿಕೊಂಡೆನೆಂದು ಹೇಳುವುದೇ ಸರಿ. ಎಪ್ಪತ್ತರ ದಶಕದಲ್ಲಿ ಈ ಜಿಲ್ಲೆಯ ಹಳಗನ್ನಡ ಕಾವ್ಯಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸುವ ಒಂದು ಬಗೆಯ ಹುಚ್ಚು ನನ್ನ ಮನಸ್ಸಿನಲ್ಲಿ ತುಂಬಿತ್ತು. ಸಂಗವಿಭು ಕವಿಯ ಮೂರು ಶತಕಗಳಲ್ಲದೆ 'ಕುಮಾರ ವಿಜಯ' ವೆಂಬ ಚಂಪೂಕಾವ್ಯ ಸಂಗ್ರಹಿಸಿ ಸಂಪಾದನೆಗೆ ತೊಡಗಿದೆ (ಅದಿನ್ನೂ ಪ್ರಕಟವಾಗಿಲ್ಲ). ಜಾಲಹಳ್ಳಿಯ ವೀರಭದ್ರಕವಿಯ ಅರವತ್ತುಮೂವರು ಪುರಾತನರ ಪುರಾಣ ಸಂಪಾದಿಸಿದೆ; ಭಾರತೀ ಪ್ರಕಾಶನದಿಂದ ಪ್ರಕಟವಾಯಿತು. ಚಿಕ್ಕಂದಿನಲ್ಲಿ ನಮ್ಮ ತಂದೆ ಹಾಡುತ್ತಿದ್ದ ತತ್ವಪದಗಳು ನನ್ನ ಹೃದಯದಲ್ಲಿ ತುಂಬಿದ್ದವು. ರಾಯಚೂರು ಜಿಲ್ಲೆಯ ಹದಿಮೂರು ಜನ ಅನುಭಾವಿ ಕವಿಗಳ ಹಾಡುಗಳನ್ನು ಬಹು ಕಷ್ಟಪಟ್ಟು ಸಂಗ್ರಹಿಸಿದೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಾಂಗದಿಂದ "ಎಡೆದೊರೆನಾಡಿನ ಅನುಭಾವಿ ಕವಿಗಳು" ಎಂಬ ಪುಸ್ತಿಕೆ ಪ್ರಕಟವಾಯಿತು. ನಾಲ್ವತ್ತು ಹಳ್ಳಿಗಳಲ್ಲಿ ಹಾಡುತ್ತಿದ್ದ ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳನ್ನು ಬಹು ಪ್ರಯಾಸದಿಂದ ಸಂಗ್ರಹಿಸಿ, ವಿಸ್ತಾರವಾದ ಪ್ರಸ್ತಾವನೆಯೊಂದಿಗೆ ಸಂಪಾದನೆ ಮಾಡಿದೆ. 'ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು' ಎಂಬ ಹೆಸರಿನಿಂದ ಗದುಗಿನ ತೋಂಟದಾರ್ಯ ಮಠದಿಂದ ಪ್ರಕಟವಾಯಿತು. ಈ ಕವಿಯನ್ನು ಕುರಿತು ಶ್ರೀ ಶಾಸ್ತ್ರಿಮಠರು ಮಹಾ ಪ್ರಬಂಧ ಬರೆದು ಪಿಎಚ್.ಡಿ. ಪದವಿಯನ್ನು ಪಡೆದರು. ಇವೆಲ್ಲ ಗ್ರಂಥಗಳಿಗಿಂತ 'ಬಾರಮಾಸ' ಸಂಪಾದಿಸುವ ಆಸೆ ಹೆಚ್ಚಾಗಿತ್ತು.

---

೧. ಬಸವ ಶತಕ, ಪಂಪಾ ಶತಕ ಮತ್ತು ಭುವನೈಕ ನಾಯಕೀ ಶತಕ.

ದಿನಗಳೆದಂತೆ ನಾನು ಸಂಪಾದನೆಯ ಕಾರ್ಯಕ್ಕಿಂತ ಕವನ, ಸಣ್ಣಕತೆ, ಕಾದಂಬರಿ, ನಾಟಕಗಳ ಕಡೆಗೆ ಹೆಚ್ಚು ಒಲವು ಬೆಳಿಸಿಕೊಂಡೆ; ಅನುವಾದವೂ ನನ್ನ ಅಚ್ಚುಮೆಚ್ಚಿನ ಕೆಲಸವಾಯಿತು. ಎರಡು ವರ್ಷಗಳ ಹಿಂದೆ ಮತ್ತೆ ಹಿಂದೆ ಸರಿದು ಶ್ರೀ ಪಾಟೀಲರ ಒತ್ತಾಯಕ್ಕೆ ಮಣಿದು ಸಂಪಾದನೆಗೆ ತೊಡಗಿದೆ. ಹಿಂದೆ ನಾನು ಆಸೆಪಟ್ಟಾಗ ಪಂ. ಬಸವರಾಜ ಶಾಸ್ತ್ರಿಗಳು ಸಹಕರಿಸಿದ್ದರೆ ಆ ಕಾರ್ಯ ಆಗಲೇ ಪೂರ್ತಿಯಾಗುತ್ತಿತ್ತು. ಅವರ ಸಹಕಾರವಿಲ್ಲದೆ ನಾನು ಸಂಪಾದಿಸಬಹುದಿತ್ತು. ನನ್ನಲ್ಲಿ ಆ ಕಾವ್ಯದ ಎರಡು ಪ್ರತಿಗಳು ಇದ್ದವು. ಶಾಸ್ತ್ರಿಗಳಲ್ಲಿ ಅದರ ಮೂಲಪ್ರತಿ ಇದೆಯೆಂದು, ಅದು ದೊರಕಿದರೆ ಸಂಪಾದನಾಕಾರ್ಯ ಸುಲಭವಾಗುವುದೆಂದು ನಾನು ಭಾವಿಸಿದ್ದೆ; (ಆದರೆ ಆ ಭಾವನೆ ಸುಳ್ಳಾಯಿತು) "ಬಾರಮಾಸ ಶಾಂತರಸರೇ ಸಂಪಾದಿಸಬಲ್ಲರು. ಅವರಿಂದ ಈ ಕೆಲಸ ಮಾಡಿಸಿರಿ" ಎಂದು ಶಾಸ್ತ್ರಿಗಳು ಶ್ರೀ ಪಾಟೀಲರಿಗೆ ಹೇಳಿದ್ದರು. ಈ ಬಾರಮಾಸ ಕಾವ್ಯ ಎಷ್ಟು ಅಚ್ಚುಮೆಚ್ಚಿನದೋ ಸಂಪಾದನೆಗೆ ತೊಡಗಿದಾಗ ಅಷ್ಟೇ ಕಷ್ಟಕೊಟ್ಟಿತು. ಈ ಎರಡು ವರ್ಷಗಳಲ್ಲಿ ನಾನು ಒಂದು ಕವನ ಬರೆಯಲಿಲ್ಲ, ಒಂದು ಕತೆ ಬರೆಯಲಿಲ್ಲ, ಚಿಂತನೆ, ಅಧ್ಯಯನ ಮಾಡಿದಷ್ಟೂ ಬಾರಮಾಸ ನನ್ನನ್ನು ಇನ್ನೂ ಇನ್ನೂ ಆಳಕ್ಕಿಳಿಯಲು ಆಹ್ವಾನವೀಯತೊಡಗಿತು. ನನ್ನ ಈ ಸಂಪಾದನೆ ಸಂಪೂರ್ಣವೆಂದು ಹೇಳಲಾರೆ. ನಾನೀ ಕೆಲಸ ಇಲ್ಲಿಗೆ ನಿಲ್ಲಿಸುವುದಿಲ್ಲ, ಇದರ ಇನ್ನಷ್ಟು ಪ್ರತಿಗಳನ್ನು ಹುಡುಕಿ ತೆಗೆಯುವೆ; ಸೋದರ ಭಾಷೆಗಳಲ್ಲಿರುವ 'ಬಾರಮಾಸ'ಗಳ ಬಗ್ಗೆ ಮಾಹಿತಿ ಸಂಗ್ರಹಿಸುವೆನು. ಹಿಂದಿ, ಗುಜರಾತಿ, ಬಂಗಾಲಿ, ಬ್ರಿಜ್ ಮುಂತಾದ ಭಾಷೆಗಳಲ್ಲಿರುವ ಬಾರಮಾಸಗಳನ್ನು ಅಧ್ಯಯನ ಮಾಡುವೆ. ಆ ಬಳಿಕ ಎಲ್ಲ ಭಾಷೆಗಳ ಬಾರಮಾಸ ಮತ್ತು ಲಿಂಗಣ್ಣನ ಬಾರಮಾಸ - ಇವುಗಳ ತೌಲನಿಕ ಅಧ್ಯಯನ ನಡೆಸುವೆ. ನನ್ನ ಈ ಆಸೆ ಎಷ್ಟರಮಟ್ಟಿಗೆ ಸಾಧ್ಯವಾಗುವುದೋ! ನನ್ನಿಂದ ಈ ಕೆಲಸವಾಗದಿದ್ದರೆ ಯಾರಾದರೂ ಈ ಕೆಲಸ ಮಾಡಿಯಾರೆಂಬ ಆಸೆತಳೆಯುವೆ.

**ಸಂಕೇತ:** ಸಂಪಾದನೆಗೆ ಮೊದಲು ಕಾವ್ಯದ ಪ್ರತಿಗಳ ಸಂಗ್ರಹಕಾರ್ಯ ಕೈಕೊಂಡಾಗ ಒಂದು ಸಂಗತಿ ಸಂತೋಷವನ್ನು ತುಂಬಿ ತಂದಿತು. ಕಲ್ಲೂರಿನ

ಲಿಂಗಣ್ಣ ಕವಿಯ ಬಾರಮಾಸವೊಂದೇ ಕನ್ನಡದಲ್ಲಿದ್ದುದು ಎಂದು ನಾನು ಭಾವಿಸಿದ್ದು ಸುಳ್ಳಾಯಿತು. ಎಸ್. ಶಿವಣ್ಣನವರು ನಿತ್ಯಾನಂದೇಶ್ವರ ಬಾರಮಾಸ ಎಂಬ ಇನ್ನೊಂದು ಹೊಸ ಬಾರಮಾಸವನ್ನು ಕಳಿಸಿದರು. ಇದರ ನಾಲ್ಕು ಪ್ರತಿಗಳು ದೊರಕಿದವು. ಇದರ ಬಗ್ಗೆ ಪ್ರಸ್ತಾವನೆಯಲ್ಲಿ ಚರ್ಚಿಸಲಾಗಿದೆ.

ಲಿಂಗಣ್ಣ ಕವಿಯ ಬಾರಮಾಸಕ್ಕೆ ಬೇರೆ ಹೆಸರಿಲ್ಲ. ಕೇವಲ 'ಬಾರಮಾಸ' ಎಂದಿದೆ. ಎಲ್ಲ ಪ್ರತಿಗಳಲ್ಲಿ 'ಬಾರಮಾಸ ಬರೆಯುವುದಕ್ಕೆ ಶುಭಮಸ್ತು' ಎಂದು ಬರೆಯಲಾಗಿದೆ. ಕೆಲವು ಬಾರಮಾಸಗಳಿಗೆ ಹೆಸರುಗಳಿರುತ್ತವೆ ಎಂಬುದಕ್ಕೆ 'ನಿತ್ಯಾನಂದೇಶ್ವರ ಬಾರಮಾಸ'ವೇ ಸಾಕ್ಷಿ. ಉರ್ದುವಿನಲ್ಲಿ ಕವಿಯ ಹೆಸರನ್ನು ಸೇರಿಸಿ ಹೇಳುವ ರೂಢಿಯಿದೆ; ಬಾರಮಾಸ ಉಜಲತ್, ಬಾರಮಾಸ ವಹಾಬ್, ಬಾರಮಾಸ ರಂಜ್ - ಹೀಗೆ. ಇಲ್ಲಿ ಉಜಲತ್, ವಹಾಬ್, ರಂಜ್ - ಇವು ಕವಿಯ ಹೆಸರುಗಳು. ಅಲ್ಲದೆ "ಬಕಟ್ ಕಹಾನಿ", "ಕಂವಲ್‌ದಿ", "ಬಾರಮಾಸ ಸುಂದರಕಲಿ" - ಎಂಬ ಹೆಸರಿನ ಬಾರಮಾಸಗಳೂ ಇವೆ.

ನಮಗೆ ಬಾರಮಾಸದ ನಾಲ್ಕು ಪ್ರತಿಗಳು ದೊರಕಿದುವು. ಇವೆಲ್ಲ ದೊರಕಿದ್ದು ಕಲ್ಲೂರಿನಲ್ಲಿಯೇ. ೧೯೬೪ರಲ್ಲಿ ಪಂ. ಬಸವರಾಜ ಶಾಸ್ತ್ರಿಗಳು ಬಾರ ಮಾಸದ ಒಂದು ಹಸ್ತ ಪ್ರತಿಯನ್ನು ಕೊಟ್ಟಿದ್ದರು. ಇದು ಕೋರಿಕಾಗದದ ಪ್ರತಿ. ೫" ಉದ್ದ ೪" ಅಗಲವಿದೆ. ಇದರಲ್ಲಿ ಸಂವತ್ಸರವಾಗಲೀ ಶಕೆಯಾಗಲೀ ಸಮೂದಾಗಿಲ್ಲ. ೧೫೦ ವರ್ಷಗಳ ಈಚಿನದೇನೂ ಅಲ್ಲ. ಇದರಲ್ಲಿ ಜ್ಯೋತಿಷ್ಯಕ್ಕೆ ಸಂಬಂಧಿಸಿದ ವಿಷಯಗಳೇ ಹೆಚ್ಚಿವೆ. ಪುರಂದರದಾಸರ ಪದ್ಯವೊಂದಿದೆ. ಕೆಲವು ಪದ ಮತ್ತು ಅಂತ್ರಮಂತ್ರಗಳು ತೆಲುಗಿನಲ್ಲಿವೆ. ಆದರೆ ಲಿಪಿ ಮಾತ್ರ ಕನ್ನಡ. "------- ಧೀರ ಪತ್ಯಪುರವಾಸ ನೆರದಾನೆ ಶ್ರೀಹನುಮೇಶ" ಎಂಬ ಅಂಕಿತದ ಒಂದು ಪದವಿದೆ. ಪತ್ಯಪುರ ಕಲ್ಲೂರಿನಿಂದ ಉತ್ತರ-ಪೂರ್ವಕ್ಕೆ ೨೦. ೨೫ ಕಿ.ಮೀ. ದೂರದಲ್ಲಿದೆ. ಕೊನೆಗೆ ಬಾರಮಾಸವಿದೆ; ಇದರ ಅಕ್ಷರಗಳು ಉಳಿದ ವಿಷಯಗಳ ಅಕ್ಷರಗಳಿಗಿಂತ ಭಿನ್ನವಾಗಿ ಸುಂದರವಾಗಿವೆ (ಈ ಕಾವ್ಯ ಓದಿ ಹಿಂದೆ ಎರಡು ಲೇಖನಗಳನ್ನು ಬರೆದಿದ್ದೆ).

ಐದು ವರ್ಷಗಳ ಹಿಂದೆ ಮನೆಕಳ್ಳತನವಾಯಿತು. ಮನೆಯ ತುಂಬ ಕಳ್ಳರು ಪುಸ್ತಕಗಳನ್ನು ಚೆಲ್ಲಾಡಿದ್ದರು. ಮನೆಯಲ್ಲಿ ಏನೂ ಸಿಕ್ಕಲಿಲ್ಲವೆಂಬ ಕಾರಣದಿಂದಲೋ ಏನೋ ಕಳ್ಳರು ಕೆಲವು ಪುಸ್ತಕಗಳನ್ನು ಹರಿದುಹಾಕಿದ್ದರು. ಹಾಳಾಗಬಾರದೆಂದು. ಬಾರಮಾಸದ ಹಸ್ತಪ್ರತಿಯನ್ನು ಪೊಟ್ಟಣದಂತೆ ದಪ್ಪಕಾಗದದಲ್ಲಿ ಸುತ್ತಿ ದಪ್ಪನದಾರಕಟ್ಟಿ ಪುಸ್ತಕಗಳ ಮಾಡದಲ್ಲಿಟ್ಟಿದ್ದೆ. ಕಳ್ಳರು ದಾರಹರಿದು, ಪೊಟ್ಟಣ ಬಿಚ್ಚಿ ಒಗೆದುಬಿಟ್ಟಿದ್ದರು. ಪುಸ್ತಕಗಳ ರಾಶಿಯಲ್ಲಿ ಕೆಳಗೆ ಬಿದ್ದ 'ಬಾರಮಾಸ'ವನ್ನು ಎತ್ತಿಕೊಂಡಾಗ ಕಂಠ ಬಿಗಿದು ಕಪಾಳ ತೊಯ್ದವು. ಆದ ಹಾನಿ ಸರಿಪಡಿಸುವಂಥದಲ್ಲ. ೩೧, ೩೨ ಮತ್ತು ೩೩ ಪದ್ಯಗಳಿರುವ ಹಾಳೆಗಳು ಹಾಗೂ ೩೮, ೩೯, ೪೦, ೪೧, ೪೨ ಮತ್ತು ೪೩ನೆಯ ಪದ್ಯಗಳಿರುವ ಕೊನೆಯ ಹಾಳೆಗಳು ಚಲ್ಲಾಪಿಲ್ಲಿಯಾದ ಆ ರಾಶಿಯಲ್ಲಿ ಸಿಕ್ಕಲಿಲ್ಲ. ಈ ಕಾವ್ಯದ ಪ್ರತಿ ಮಾಡಿಕೊಂಡಿರಲಿಲ್ಲ. ಅನೇಕ ಸಲ ಜಿರಾಕ್ಸ್ ಮಾಡಿಸುವ ಮನಸ್ಸಾದರೂ ಆ ಕೆಲಸವಾಗಿರಲಿಲ್ಲ. ಸಂಪಾದನೆಯ ಕಾಲಕ್ಕೆ ಸದರಿ ಪದ್ಯಗಳಿಲ್ಲದಿರುವುದು ಬಹುದೊಡ್ಡ ಕೊರತೆಯೆನಿಸಿತು.

ಈ ಪ್ರತಿ ಬೇರೆ ಪ್ರತಿಗಳಿಗಿಂತ ಶುದ್ಧವಾದುದೂ ಕಾಲದ ದೃಷ್ಟಿಯಿಂದ ಹಿಂದಿನದೂ ಆಗಿದೆ. ಇದಕ್ಕೆ 'ಶಾ' ಪ್ರತಿಯೆಂದು ಹೆಸರಿಟ್ಟಿದೆ.

ಇನ್ನೊಂದು ಪ್ರತಿ ಕಲ್ಲೂರಿನ ಗಡ್ಡಂ ವೆಂಕಣ್ಣನವರಿಂದ ದೊರೆತುದು. ಈ ಪ್ರತಿಯಲ್ಲಿ ಮೊದಲಿಗೆ ಶಬ್ದಕೋಶವಿದೆ. ಕೆಲವು ಹಾಳೆಗಳು ಹರಿದುಹೋಗಿವೆ. 'ಅಡಿ' ಶಬ್ದದಿಂದ (೯ನೆಯ ಪುಟದಿಂದ) 'ಪಾದ' ಶಬ್ದದವರೆಗೆ (೧೦೭ ಪುಟದವರೆಗೆ) ಶಬ್ದಕೋಶವಿದೆ. ಇದು ಮಹತ್ವದ ಶಬ್ದಕೋಶ. ಒಂದೊಂದು ಶಬ್ದವನ್ನು ಸಂಸ್ಕೃತವೋ ಕನ್ನಡವೋ ಎಂದು ಹೇಳಿ, ಆ ಶಬ್ದಕ್ಕೆ ನಾನಾರ್ಥಗಳನ್ನು ಕೊಡಲಾಗಿದೆ. ೧೦೮ನೆಯ ಪುಟದಿಂದ ೧೧೧ನೆಯ ಪುಟದವರೆಗೆ ಬಾರಮಾಸ ಕಾವ್ಯವಿದೆ. ಅನಂತರ ೨೨ ನುಡಿಗಳ ಸ್ತೋತ್ರ ಪದ್ಯಗಳು (ಸಂಸ್ಕೃತ ಭೂಯಿಷ್ಠ) ಮತ್ತು ಚೆನ್ನಮಲ್ಲೇಶ್ವರ ಶತಕವಿದೆ; ಶತಕ ಮುಗಿದಿಲ್ಲ; ೧೭ ನುಡಿಗಳ ಬಳಿಕ ಹಾಳೆಗಳು ಹರಿದಿವೆ. ಬಾರಮಾಸ ಕಾವ್ಯದ ಕೊನೆಗೆ "ಈ ಬಾರಮಾಸಂ ಸಮಾಪ್ತ:

ಮಿತಿ ಶಾಲ್ವರಿ ನಾಮ ಸಂ ॥ ರದ ಜೇಷ್ಠ ಶು॥ ೧೨ ೧೨ ಯಲ್ಲು ಭಾನುವಾರ ಸಮಾಪ್ತಃ" ಎಂದು ಬರೆದಿದೆ. ದ್ವಾದಶಿಯ ಸಂಖ್ಯೆ ಎರಡು ಸಲ ಬರೆಯಲಾಗಿದೆ. ಶಾಲ್ವರಿಯಿಂದ ಈ ಸಂ ॥ ಶ್ರೀಮುಖದವರೆಗೆ ೩೩ ವರ್ಷಗಳಾಗುತ್ತವೆ. ಆದರೆ ಕಾಗದ ಮತ್ತು ಬರವಣಿಗೆ (ಅಕ್ಷರ) ದೃಷ್ಟಿಯಿಂದ ನೋಡಿದರೆ, ಅರವತ್ತು ವರ್ಷದ ಒಂದು ಸುತ್ತು ಮೀರಿದ್ದು ಎನಿಸುತ್ತದೆ. ಒಟ್ಟು ೯೩ ವರ್ಷ ಹಿಂದಿನ ಪ್ರತಿಯಿದೆಂದು ಹೇಳಲು ಅಡ್ಡಿಯೇನಿಲ್ಲ. ಆದಷ್ಟು ಈ ಪ್ರತಿ ಶುದ್ಧವಾಗಿದೆ. ಇದನ್ನು 'ಗ' ಪ್ರತಿಯೆಂದು ಕರೆಯಲಾಗಿದೆ.

ಪಂ. ಬಸವರಾಜ ಶಾಸ್ತ್ರಿಗಳಲ್ಲಿ ಹಳೆಯ ಪ್ರತಿಯೊಂದಿತ್ತು (ಅದೇ ಮೂಲ ಪ್ರತಿಯಿರಬೇಕೆಂದು ನಾನು ಭಾವಿಸಿದ್ದೆ). ಕೆಲವು ವರ್ಷಗಳ ಹಿಂದೆ ಅದನ್ನು ಅವರು ಪ್ರತಿಮಾಡಿಸಿದರು. ಪ್ರತಿಮಾಡುವವರು ಬಹಳ ತಪ್ಪುಗಳನ್ನು ಮಾಡಿದ್ದಾರೆ. ಅದು ಕಾರಣ ಈ ಪ್ರತಿಯಿಂದ ಪಾಠ ನಿರ್ಣಯಕ್ಕೆ ಅಷ್ಟು ಅನುಕೂಲವಾಗಲಿಲ್ಲ. ಇದರ ಮೂಲ ಪ್ರತಿ ಕಳೆದು ಹೋಗಿದೆಯೆಂದು ಶಾಸ್ತ್ರಿಗಳು ಹೇಳಿದರು. ಇದರಲ್ಲಿ ಪ್ರತಿಮಾಡಿದವರ ಹೆಸರಾಗಲೀ ಶಕೆ ಸಂವತ್ಸರಗಳಾಗಲೀ ಇಲ್ಲ. ಇದನ್ನು 'ಬ' ಪ್ರತಿಯೆಂದು ಗುರುತಿಸಲಾಗಿದೆ.

ಶ್ರೀ ರಾಮಸ್ವಾಮಿ ನುಲಿಯವರು ಕಲ್ಲೂರಿನ ತಮ್ಮ ಸ್ನೇಹಿತರಲ್ಲಿದ್ದ ಬಾರಮಾಸ ಕಾವ್ಯವನ್ನು ಬಹಳ ಹಿಂದೆಯೇ ಪ್ರತಿಮಾಡಿ ನನಗೆ ತಂದುಕೊಟ್ಟಿದ್ದರು. ಈ ಪ್ರತಿಯು ಅಷ್ಟು ಶುದ್ಧವಾಗಿಲ್ಲ.(ಇದರ ಮೂಲ ಪ್ರತಿಯಿದ್ದ ವ್ಯಕ್ತಿ ಈಗ ಇಲ್ಲ. ಅವರ ಮನೆಯಲ್ಲಿ ಹುಡುಕಿಸಿ ನೋಡಿದೆವು. ಆ ಪ್ರತಿ ಸಿಕ್ಕಲಿಲ್ಲ). ಇದನ್ನು 'ರಾ' ಪ್ರತಿಯೆಂದು ಕರೆಯಲಾಗಿದೆ.

ಮೇಲೆ ಹೇಳಿದ ನಾಲ್ಕೂ ಪ್ರತಿಗಳು ಒಂದೇ ಪ್ರತಿಯಿಂದ ಬಂದುವೋ ಬೇರೆ ಬೇರೆ ಪ್ರತಿಗಳಿಂದ ಬಂದುವೋ ಎಂಬುದರ ನಿರ್ಣಯಮಾಡುವುದು ಕಷ್ಟ. ಅಲ್ಲದೆ ಈ ಪ್ರತಿಗಳಿಂದ ಮೂಲ ಪ್ರತಿಯ ಹತ್ತಿರಕ್ಕೆ ಹೋಗಿ ಶುದ್ಧ ಪಾಠ

ನಿರ್ಣಯಿಸುವುದು ಕಷ್ಟಸಾಧ್ಯ. ಅನೇಕ ಕಡೆ ಛಂದಸ್ಸು ತಪ್ಪಾಗಿದೆ; ಅಕ್ಷರ ದೋಷಗಳೂ ವಿಪರೀತ.

[ ] ಈ ಕಂಸಿನಲ್ಲಿರುವ ಶಬ್ದ ಅಥವಾ ಅಕ್ಷರ ನನ್ನ ಊಹೆಯ ಪಾಠ. ಎಲ್ಲ ಪ್ರತಿಗಳ ಪಾಠವನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದೇನೆ.

ಸಂದಿಗ್ಧವೃತ್ತಗಳು, ಛಂದಸ್ಸು ತಪ್ಪಿದ ವೃತ್ತಗಳು ಹಲವಿವೆ. ಅವುಗಳನ್ನು ತಿದ್ದುವಗೊಡವೆಗೆ ಹೋಗದೆ ಇದ್ದಂತೆಯೇ ಇರಿಸಿದ್ದೇನೆ.

ಶ್ರೀ ಎಸ್. ಶಿವಣ್ಣನವರು "ಕರ್ನಾಟಕ ಕವಿಚರಿತೆಯ ಅನುಕ್ತ ಸೂಚಿ" ಸಂಗ್ರಹಿಸಿದ್ದಾರೆ. ಇದರಲ್ಲಿ ಬಾರಮಾಸ ಉಕ್ತವಾಗಿದೆ. ಕವಿ ಮತ್ತು ಕಾಲದ ಬಗ್ಗೆ ವಿವರವಿಲ್ಲ. ಪದ್ಯವೆಂದೂ ೩೦ ಪದ್ಯಗಳಿವೆಯೆಂದೂ ಸೂಚಿಸಿದ್ದಾರೆ. ಈ ಪ್ರತಿ ಹೈದ್ರಾಬಾದ ಉಸ್ಮಾನಿಯಾ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿದೆ ಎಂದು ತಿಳಿಸಿದ್ದಾರೆ (OUL ಸಂ. ೨೩೮). ಅಲ್ಲಿ ಮೂರು ದಿನ ಹುಡುಕಿದರೂ ಆ ಪ್ರತಿ ದೊರಕಲಿಲ್ಲ.

ಇನ್ನೂ ಕೆಲವು ಪ್ರತಿಗಳು ದೊರಕಿದ್ದರೆ ಚೆನ್ನಾಗಿತ್ತು. ನಮ್ಮ ಹಳ್ಳಿಗರು ಬಲು ಮುಗ್ಧರು; ಮೂಢ ನಂಬಿಕೆಗಳಿಂದ ದೂರಾಗಲು ಒಲ್ಲದವರು. ಮನೆಯಲ್ಲಿರುವ ಹಳೆಯ ಗ್ರಂಥಗಳನ್ನು, ಹಸ್ತಪ್ರತಿಗಳನ್ನು, ತಾಡವೋಲೆಗಳನ್ನು ಕೊಟ್ಟರೆ ಮನೆಯ ಸಂಪತ್ತು ಹಾಳಾಗಿ ದುರ್ದೆಶೆಗೆ ಈಡಾಗುವೆವೆಂದು ನಂಬಿದವರು. ಕಲ್ಲೂರು ಸುತ್ತ-ಮುತ್ತಲಿನ ಹಳ್ಳಿಗಳಲ್ಲಿ ಬಾರಮಾಸದ ಪ್ರತಿಗಳಿವೆ. ಅವರನ್ನು ಒಲಿಸಿಕೊಂಡು ಹಸ್ತಪ್ರತಿಗಳನ್ನು ಪಡೆಯಲು ಕೆಲವು ವರ್ಷಗಳೇ ಬೇಕಾಗುವವು. ನಾನು ಆಶಾವಾದಿ; ಆ ಕೆಲಸ ಮುಂದುವರಿಸುವೆ. ನನ್ನ ಆತ್ಮೀಯ ಸ್ನೇಹಿತರಾದ ರಾಮಸ್ವಾಮಿ ನುಲಿಯವರೂ ನನ್ನಂತೆ ಆಶಾವಾದಿಗಳು; ಅವರೂ ಈ ಕೆಲಸವನ್ನು ಮುಂದುವರೆಸುವರು.

**ನಮನ** : ನನ್ನ ಅಚ್ಚುಮೆಚ್ಚಿನ ಲಿಂಗಣ್ಣವೊಡೆಯನ ಬಾರಮಾಸ ಕಾವ್ಯವನ್ನು ಸಂಪಾದಿಸಲು ಅವಕಾಶ ಮಾಡಿಕೊಟ್ಟು ನನ್ನ ಬಹುವರ್ಷಗಳ ಇಚ್ಛೆಯನ್ನು ಪೂರ್ತಿಗೊಳಿಸಿದವರು ಕಲ್ಲೂರಿನ ವಿ.ಆರ್. ಪಾಟೀಲರು (ಎಡಿಷನಲ್ ಕಮಿಷನರ್, ವಾಣಿಜ್ಯ ತೆರಿಗೆ ಇಲಾಖೆ, ಕರ್ನಾಟಕ ರಾಜ್ಯ). ಶಿಸ್ತು, ಸಂಯಮ, ಕಾರ್ಯಕ್ಷಮತೆ, ಕಾರ್ಯದಕ್ಷತೆ, ಶುದ್ಧ ನಡೆ ನುಡಿ, ಪ್ರಾಮಾಣಿಕತೆ ಮತ್ತು ಮಾನವೀಯ ಪ್ರೇಮಕ್ಕೆ ರಾಜ್ಯದಲ್ಲಿಯೇ ಹೆಸರಾದವರು ಪಾಟೀಲರು.

ಕವಿಯ ವಂಶಜರಾದ ಮಾರಟೇಶ್ವರ ಅರ್ಚಕರಾದ ಪಂ. ಬಸವರಾಜ ಶಾಸ್ತ್ರಿಗಳು ದೊಡ್ಡ ವಿದ್ವಾಂಸರು. ಇವರು ಗ್ರಂಥ ಸಂಪಾದನೆಯಲ್ಲಿ ನನಗೆ ಅನೇಕ ದೃಷ್ಟಿಗಳಿಂದ ನೆರವಾಗಿದ್ದಾರೆ. ಬಾರಮಾಸದ ಬಗ್ಗೆ ತಮ್ಮವೇ ಆದ ಕೆಲವು ಒಳನೋಟಗಳನ್ನು ಹೊಂದಿದ್ದಾರೆ. ಅವುಗಳಲ್ಲಿ ಒಂದನ್ನೂ ನಾನು ಸ್ವೀಕರಿಸಿಲ್ಲ. ಈ ಕಾವ್ಯವನ್ನು ಅವರು ಚಂದಾಗಿ ಹಾಡುತ್ತಾರೆ. ಪಾಠ ನಿರ್ಣಯಗಳಲ್ಲಿ ಸಹಕರಿಸಿದ್ದಾರೆ. ಅವರು ಸಂಸ್ಕೃತ ವಿದ್ವಾಂಸರು. ಅವರ ಬಿಗುವಾದ ನಿಲುವುಗಳನ್ನು ನನಗೆ ಒಪ್ಪಲು ಅಸಾಧ್ಯವಾಯಿತು. ಛಂದಸ್ಸು ಸರಿಗೊಳಿಸಿ ಒಂದು ಪಾಠ ನಿರ್ಣಯವನ್ನು ಮಾಡಿ ಕೊಟ್ಟು ಅದನ್ನು ನನ್ನ ಮಾತುಗಳಲ್ಲಿ ಬರೆಯಲು ಒತ್ತಾಯಿಸಿದರು.[ಅಬ್ಜಾಗ್ನೆರ್ದಹನಾರ್ಕ] ರೋಚಿ (ವೃತ್ತ ೧೩). ಛಂದಸ್ಸು ಸರಿಹೋಯಿತು, ಅರ್ಥವೂ ಸರಿಹೋಯಿತು. ಆದರೆ ನಾಲ್ಕು ವರ್ಷದ ಹುಡುಗಿಗೆ ಒಂದು ಮಣ ಬಂಗಾರದ ಆಭರಣಗಳನ್ನು ತೊಡಿಸಿದಂತಾಯಿತೆಂದು ನಗುತ್ತ ನಾನು ಹೇಳಿದಾಗ ಅವನ ಮುಖದಲ್ಲಿಯೂ ನಗೆಮೂಡಿದಂತೆ ಕಂಡಿತು. ಗ್ರಂಥ ಸಂಪಾದನೆ ಮುಗಿಯುವವರೆಗೆ ನಾನು ಕೊಟ್ಟ ತೊಂದರೆಗಳನ್ನು ಸಹಿಸಿ ಸಹಕರಿಸಿದರು.

ನನ್ನ ಜೊತೆಗೆ ಕಾವ್ಯವನ್ನು ಅಧ್ಯಯನ ಮಾಡುತ್ತ ಕಾವ್ಯವನ್ನು ಅರ್ಥೈಸುವಲ್ಲಿ, ಪಾಠನಿರ್ಣಯಗಳಲ್ಲಿ ನೆರವಾದವರು ಚಂದ್ರಶೇಖರ ವಸ್ತ್ರದ ಮತ್ತು ರಾಮಸ್ವಾಮಿ ನುಲಿ ಅವರು. ಎಸ್.ಜಿ.ಸ್ವಾಮಿ, ನನ್ನ ಮಡದಿ ಲಕ್ಷ್ಮೀದೇವಿ ಮತ್ತು ಬಂಡುರಾವ ಬಾಗಿ ಇವರ ನಿರಂತರ ನೆರವಿಲ್ಲದಿದ್ದರೆ ನಾನು ಸಂಪಾದನಾ ಕಾರ್ಯವನ್ನು ಸಮರ್ಥವಾಗಿ ಮಾಡಿಮುಗಿಸಲು ಸಾಧ್ಯವಾಗುತ್ತಿರಲಿಲ್ಲ. ರಾಮಸ್ವಾಮಿ ನುಲಿಯವರು ಕಲ್ಲೂರು ಮತ್ತು ಇತರ ಸ್ಥಳಗಳಿಗೆ ಹಸ್ತಪ್ರತಿ

ಹುಡುಕಲು ಮತ್ತು ಮಾಹಿತಿ ಸಂಗ್ರಹಿಸಲು ಬೇಸರವಿಲ್ಲದೆ ನೂರಾರು ಸಲ ಅಡ್ಡಾಡಿದರು; ಇವರಂತೆಯೇ ಎಸ್.ಜಿ. ಸ್ವಾಮಿ ಮತ್ತು ಬಂಡೂರಾವ ಚಾಗಿ ಅಲ್ಲಲ್ಲಿ ಅಡ್ಡಾಡಿ ನನಗೆ ಬೇಕಾದ ಮಾಹಿತಿ ಸಂಗ್ರಹಿಸಿಕೊಟ್ಟರು. ನಾನು ಹೇಳಿದ್ದನ್ನು ಬರೆಯುತ್ತ ಅಲ್ಲಲ್ಲಿ ಸಲಹೆ ನೀಡುತ್ತ ನನಗೆ ತೃಪ್ತಿಯಾಗುವವರೆಗೆ ಮತ್ತೆ ಮತ್ತೆ ಬದಲಾಯಿಸಿದ್ದನ್ನು ಬರೆಯುತ್ತ ನಾನು ಕೊಡುವ ಕಾಟವನ್ನು ತಾಳುತ್ತ ಕೊನೆಗೆ ಅಚ್ಚಿನ ಶುದ್ಧಪ್ರತಿಯನ್ನು ಮಾಡಿಕೊಟ್ಟು ಸಹಕರಿಸಿದವಳು ನನ್ನ ಪತ್ನಿ ಲಕ್ಷ್ಮೀದೇವಿ.

ಬಾರಮಾಸದಲ್ಲಿರುವ ಹಬ್ಬ, ಹುಣ್ಣಿಮೆ, ಉತ್ಸವ, ಸ್ಥಳ ಮುಂತಾದವುಗಳನ್ನು ಅತ್ಯಂತ ಆತ್ಮೀಯತೆಯಿಂದ ಹೇಳಿದವರು ನಾರಾಯಣಾಚಾರ್ಯ ಪುರೋಹಿತರು. ಅಸಾಧಾರಣ ಪಾಂಡಿತ್ಯ ಮತ್ತು ಅದಕ್ಕೆ ತಕ್ಕ ವಿನಯವುಳ್ಳ ಪುರೋಹಿತರು ಪೂರ್ಣಕಾವ್ಯವನ್ನು ಓದಿಸಿ ಸಂತೋಷ ಪಟ್ಟು, ನನ್ನ ಅನೇಕ ಸಂಶಯಗಳನ್ನು ದೂರ ಮಾಡಿದರಲ್ಲದೆ ನಾನು ವಿಚಾರಮಾಡದ ಅನೇಕ ಹೊಸ ವಿಷಯಗಳತ್ತ ನನ್ನ ಗಮನ ಹರಿಸಿದರು.

ಮನೆಗೆಲಸ ಮಾಡುತ್ತಲೇ ಸಾಹಿತ್ಯದ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡ ಸೋದರಿ ಲಕ್ಷ್ಮೀದೇವಿ ಚಾಗಿಯವರು ಹಬ್ಬ ಹುಣ್ಣಿಮೆಗಳಲ್ಲಿ ಅಡಗಿರುವ ಕೆಲವು ವಿಶೇಷ ವಿಚಾರಗಳನ್ನು ನನಗೆ ತಿಳಿಸಿಕೊಟ್ಟರು. ಕಾಲನಿರ್ಣಯಕ್ಕೆ ಸಹಕಾರಿಯಾದ ಗ್ರಂಥಗಳನ್ನು ಒದಗಿಸಿದವರು ಹಿರಿಯಕವಿಗಳೂ ನನ್ನ ಆತ್ಮೀಯ ಸ್ನೇಹಿತರೂ ಆದ ಜಿ. ಕೃಷ್ಣರಾವ್ ಅವರು. ಕಾವ್ಯದಲ್ಲಿ ಉಕ್ತವಾದ ಕೆಲವು ಜಾನಪದ ಸಂಪ್ರದಾಯಗಳನ್ನು ತಿಳಿಸಿ ಸಹಕರಿಸಿದವರು ಕಲಬುರ್ಗಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿವೃತ್ತ ನಿರ್ದೇಶಕರಾದ ಡಾ.ಎಂ.ಜಿ. ಬಿರಾದಾರ ಅವರು. ಬಾರಮಾಸ ಕಾವ್ಯ ಪ್ರಕಾರದ ಗಂಗೋತ್ರಿಯಾದ ಹಿಂದಿ ಭಾಷೆಯಲ್ಲಿರುವ ಅನೇಕ ಕಾವ್ಯಗಳನ್ನು ಓದಿ ತೋರಿಸಿ ಮತ್ತು ಬಾರಮಾಸ ಬೆಳೆದು ಬಂದ ರೀತಿಯನ್ನು ವಿವರಿಸಿದವರು ಎಲ್.ವಿ.ಡಿ. ಕಾಲೇಜಿನ ಹಿಂದಿ ವಿಭಾಗದ ಮುಖ್ಯಸ್ಥರೂ ನನ್ನ ನೆಚ್ಚಿನ ಸ್ನೇಹಿತರೂ ಆದ ನಾಗರಾಜ ಕಾಳೆಯವರು.

ಎಸ್. ಶಿವಣ್ಣನವರು ಎಂದಿನಿಂದಲೂ ನನ್ನ ಸಂಶೋಧನ ಕಾರ್ಯಕ್ಕೆ ಸಹಾಯ ಮಾಡುತ್ತ ಬಂದವರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಚ್ಯವಿಭಾಗದ ಅಧಿಕಾರಿಗಳಾದ ಇವರು, ನಿತ್ಯಾನಂದೇಶ್ವರ ಎಂಬ ಇನ್ನೊಂದು ಹೊಸ ಬಾರಮಾಸ ಇರುವುದನ್ನು ನನ್ನ ಗಮನಕ್ಕೆ ತಂದು. ತಮ್ಮ ಸಂಸ್ಥೆಯಲ್ಲಿರುವ ಈ ಕಾವ್ಯದ ಎರಡು ಹಸ್ತಪ್ರತಿಗಳ ಜಿರಾಕ್ಸ್ ಪ್ರತಿ ಮಾಡಿ ಕಳಿಸಿದರು. ಮತ್ತು ಇದೇ ಕಾವ್ಯ ಇತರೆಡೆ ದೊರಕುವದನ್ನೂ ತಿಳಿಸಿದರು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಡಾ. ಎಂ. ಎಂ. ಕಲಬುರ್ಗಿ ಮತ್ತು ಡಾ. ಬಸವರಾಜ ಶಿರೂರ ಅವರು ತಮ್ಮ ಅಧ್ಯಯನ ಪೀಠದಲ್ಲಿರುವ ನಿತ್ಯಾನಂದೇಶ್ವರ ಬಾರಮಾಸದ ಪ್ರತಿಗಳನ್ನು ಮಾಡಿಕಳಿಸಿದರು. ಗದುಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯ ಕಾರ್ಯದರ್ಶಿಗಳು ತಮ್ಮ ಪ್ರಾಚ್ಯಗ್ರಂಥಾಲಯದಲ್ಲಿರುವ ನಿತ್ಯಾನಂದೇಶ್ವರ ಬಾರಮಾಸ ಪ್ರತಿಮಾಡಿ ಕಳಿಸಿದರು. ಹೃದಯ ಚಿಕಿತ್ಸೆಯಾಗಿ ಕೆಲವೇ ದಿನಗಳಾಗಿದ್ದರೂ ನನಗಾಗಿ ಬಾರ ಮಾಸದ ಪ್ರತಿಮಾಡಿ ಕಳಿಸಲು ಗ್ರಂಥಾಲಯ ಪ್ರಾಚ್ಯವಸ್ತು ಸಂಗ್ರಹಾಲಯವಿರುವ ಚಿಕ್ಕ ಗುಡ್ಡವನ್ನೇರಿದವರು ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಬಿ. ರಾಮಚಂದ್ರರಾವ್ ಅವರು. ಇದೇ ಕೆಲಸಕ್ಕಾಗಿ ಮೂರು ದಿನ ತಮ್ಮ ಮನೆಯಿಂದ ಉಸ್ಮಾನಿಯಾ ವಿಶ್ವವಿದ್ಯಾಲಯದ ಗ್ರಂಥಾಲಯಕ್ಕೆ ತಮ್ಮ ಅನಾರೋಗ್ಯವನ್ನು ನಿರ್ಲಕ್ಷಿಸಿ ಅಲೆದವರು ಪ್ರೀತಿಯ ಗೆಳೆಯರಾದ ಎಂ. ಎಸ್. ಮಹಾಂತಯ್ಯನವರು ಮತ್ತು ಎನ್. ಅಮರೇಶ ಅವರು.

ಅತ್ಯಂತ ಸುಂದರ ಮತ್ತು ಸಾಂಕೇತಿಕವಾದ ಮುಖಪುಟದ ಚಿತ್ರವನ್ನು ಮತ್ತು ಕಾವ್ಯದಲ್ಲಿ ಸಂದರ್ಭಕ್ಕೆ ಬೇಕಾದ ಮತ್ತು ಹತ್ತು ಅವತಾರದ ರೇಖಾ ಚಿತ್ರಗಳನ್ನು (ಚಿಕಣಿ ಚಿತ್ರಗಳು) ಚಿತ್ರಿಸಿಕೊಟ್ಟವರು ಅಂತಾರಾಷ್ಟ್ರೀಯ ಖ್ಯಾತಿಯ ವಿಜಯ ಹಾಗರಗುಂಡಿಗೆ, ಗುಲ್ಬರ್ಗಾ ಅವರು. ಮುಖಪುಟದ ಸುಂದರ ಅಕ್ಷರಗಳನ್ನು ಬರೆದುಕೊಟ್ಟವರು ನನ್ನ ಆತ್ಮೀಯರಾದ ಸುರೇಶ ವೈದ್ಯರು.

ಈ ಕಾವ್ಯದ ಸಂಪಾದನೆಯ ಕಾಲಕ್ಕೆ ಬಂದ ಅಡೆತಡೆಗಳನ್ನು ನಿವಾರಿಸಿ ಧೈರ್ಯ ನೀಡಿದವರು ರಾಯಚೂರು ಜಿಲ್ಲಾ ಪರಿಷತ್ತಿನ ಮಾಜಿ ಅಧ್ಯಕ್ಷರು ಮತ್ತು ನನ್ನ ಸ್ನೇಹಿತರಾದ ಕೆ. ಸುರೇಶರೆಡ್ಡಿಯವರು. ಬನ್ನಂಜೆ ಗೋವಿಂದಾಚಾರ್ಯ.

ಚನ್ನಬಸವಪ್ಪ ಬೆಟ್ಟದೂರು, ಶಂಕರಗೌಡ ಬೆಟ್ಟದೂರು, ಸೋಮನಾಥ, ಎಂ.ಕೃಷ್ಣ, ಎಂ. ಕೆ. ಭಾಸ್ಕರರಾವ್, ರಾಘವೇಂದ್ರ ಕುಷ್ಟಗಿ ಮತ್ತು ಎಂ. ಮದನಗೋಪಾಲ - ಇವರಿಂದ ಹಲವು ಬಗೆಯ ನೆರವು ಪಡೆದಿದ್ದೇನೆ.

ಕಾವ್ಯ ಕುರಿತು ಅನೇಕ ಹೊಸ ಹೊಳಹುಗಳನ್ನು ತೋರಿಸಿ ನಿತ್ಯಾನಂದೇಶ್ವರ ಬಾರಮಾಸವನ್ನು ಅನುಬಂಧದಲ್ಲಿ ಸೇರಿಸಲು ಸೂಚಿಸಿದವರು ಮತ್ತು ಈ ಕಾವ್ಯವನ್ನು ಹಂಪಿ, ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿಸಿ ಕನ್ನಡಿಗರ, ಅದೂ ಹೈದ್ರಾಬಾದ ಕರ್ನಾಟಕ ಜನರ ಪ್ರೀತಿಯನ್ನು ಸೂರೆಗೊಂಡವರು ನನ್ನ ಪ್ರೀತಿಯ ಸ್ನೇಹಿತರೂ ಕುಲಪತಿಗಳೂ ಆದ ಡಾ. ಚಂದ್ರಶೇಖರ ಕಂಬಾರ ಅವರು.

ಖಚಿತ, ನೇರ, ಸ್ಪಷ್ಟ ನಿಲುವುಗಳಿಂದ ತೂಕದ ವಿಮರ್ಶೆಗೆ ಹೆಸರಾದ ಡಾ.ಎಚ್.ಎಸ್. ರಾಘವೇಂದ್ರರಾವ್ ಅವರು ಮುನ್ನುಡಿ ಬರೆದು ಇನ್ನೂ ಸಾಹಿತ್ಯ ಕೃಷಿ ಮಾಡಲು ನನ್ನ ವೃದ್ಧಾಪ್ಯವನ್ನು ಯೌವ್ವನದಲ್ಲಿ ಪರಿವರ್ತಿಸಿದ್ದಾರೆ.

ಇವರೆಲ್ಲರಿಗೆ ನನ್ನ ತುಂಬು ಹೃದಯದ ನಮನಗಳು.

ಆಜಾದನಗರ<br>ರಾಯಚೂರು<br>ಡಿಸೆಂಬರ್, ೧೯೯೩

**ಶಾಂತರಸ**

# ಪ್ರಸ್ತಾವನೆ

## ಹಿನ್ನೆಲೆ

'ಬಾರಮಾಸ' ಒಂದು ಕಾವ್ಯ ಪ್ರಕಾರವಾಗಿದೆ. 'ಬಾರಹ' ಎಂದು ಹಿಂದಿ ಮತ್ತು ಉರ್ದು ಭಾಷೆಯಲ್ಲಿ ಬಳಕೆಯಾದ ಈ ಶಬ್ದ ಮೂಲ ಹಿಂದಿ ಭಾಷೆಗೆ ಸೇರಿದ್ದು; ಹನ್ನೆರಡು ಎಂಬುದು ಇದರ ಅರ್ಥ. ಕನ್ನಡದಲ್ಲಿ ಅದು 'ಹ' ಕಾರ ಕಳೆದುಕೊಂಡು ಬಾರ ಅಥವಾ ಬಾರಾ ಎಂದಾಗಿದೆ. ಮಾಸ ಎಂದರೆ ತಿಂಗಳು.

ಬಾರಮಾಸ ಕಾವ್ಯಪ್ರಕಾರ ಬಹುಮಟ್ಟಿಗೆ ಭಾರತೀಯ ಎಲ್ಲ ಭಾಷೆಗಳಲ್ಲಿ ಉಂಟು. ಆದರೆ ಈ ಕಾವ್ಯಪ್ರಕಾರದ ಗಂಗೋತ್ರಿ ಹಿಂದಿ ಭಾಷೆ. ಕ್ರಿ. ಶ. ೯೨೭ ರಷ್ಟು ಹಿಂದಿನಿಂದ ಇದರ ಪರಂಪರೆ ಬೆಳೆದುಕೊಂಡು ಬಂದಿದೆ ಎಂದು ತಿಳಿದು ಬರುತ್ತದೆ.

ಸಂಸ್ಕೃತ ಮತ್ತು ಇತರ ಭಾಷೆಗಳ ಮಹಾಕಾವ್ಯಗಳಲ್ಲಿ ಋತುಗಳ ವರ್ಣನೆಯನ್ನು ಮಾಡಿಯೇ ತೀರಬೇಕೆಂದು ಸಂಪ್ರದಾಯವಿದೆ. ಮಹಾಕಾವ್ಯಗಳ ಲಕ್ಷಣಗಳಲ್ಲಿ ಋತುವರ್ಣನೆ ಅತಿ ಮುಖ್ಯವಾದುದೆಂದು ಭಾವಿಸಲಾಗಿದೆ. ಸಂಸ್ಕೃತದಲ್ಲಿ ಕಾಳಿದಾಸನನ್ನು ಉಳಿದು ಇತರ ಕವಿಗಳಾಗಲೀ ಅಥವಾ ಬೇರೆ ಭಾಷೆಯ ಕವಿಗಳಾಗಲೀ ಪ್ರತ್ಯೇಕವಾಗಿ ಋತುವರ್ಣನೆಯ ಕುರಿತು ಕಾವ್ಯ ರಚಿಸಿಲ್ಲ. ಕಾಳಿದಾಸನೊಬ್ಬನೇ ಪ್ರತ್ಯೇಕವಾಗಿ ಆರು ಋತುಗಳ ವರ್ಣನೆಯ ಕಾವ್ಯ ರಚಿಸಿದ ಮೊದಲ ಕವಿಯೆಂಬುದನ್ನು ಮರೆಯುವಂತಿಲ್ಲ; ಆ ಕಾವ್ಯ 'ಋತುಸಂಹಾರ.'

ಹಿಂದಿ ಕವಿಗಳು ಪ್ರತ್ಯೇಕವಾಗಿ ಋತು ವರ್ಣನೆಗೆ ಕೈ ಹಾಕಿದರು. ಬಹು ಹಿಂದೆಯೇ ಋತುಗಳ ಮತ್ತು ಮಾಸಗಳ ವರ್ಣನೆಯನ್ನೊಳಗೊಂಡ ಕಾವ್ಯಗಳನ್ನು ಸೃಷ್ಟಿಸಿದರು. ಬರಿಯ ಋತುಗಳ ಮತ್ತು ಮಾಸಗಳ ವರ್ಣನೆ ನೀರಸವೆನಿಸಿರಬೇಕು. ಸಹೃದಯರಿಗೆ ಪ್ರಿಯವಾಗಿರಲಿಕ್ಕಿಲ್ಲ. ಆದುದರಿಂದ ಬರುಬರುತ್ತ ಋತು ಮತ್ತು ಮಾಸಗಳ ವರ್ಣನೆಯನ್ನು ಹಿಂದಿಟ್ಟುಕೊಂಡು ಪ್ರಿಯ ಮತ್ತು ಪ್ರೇಯಸಿಯರ ಪ್ರೀತಿ ಮತ್ತು ವಿರಹಗಳ ವರ್ಣನೆಗೆ ತೊಡಗಿದರು. ಬಾರಹಮಾಸವೆಂಬ ಹೆಸರಿನಿಂದ ಈ ಕಾವ್ಯಪ್ರಕಾರ ಅತ್ಯಂತ ಜನಪ್ರಿಯವಾಯಿತು. ಪ್ರಿಯನು ಪ್ರೇಯಸಿಯನ್ನು ಅಗಲಿ ಬೇಟೆಗಾಗಿಯೋ, ರಾಜಕೀಯ ಕೆಲಸಕ್ಕೋ, ವ್ಯಾಪಾರಕ್ಕೋ, ಯುದ್ಧಕ್ಕೋ ಹೋಗುತ್ತಾನೆ. ಕೆಲವು ಕಡೆ ಪ್ರಿಯನ ಅಗಲಿಕೆಯ ಕಾರಣವೇ ತಿಳಿಯುವುದಿಲ್ಲ. ಪ್ರಿಯಳ ವಿರಹದಿಂದಲೇ ಕಾವ್ಯ ಪ್ರಾರಂಭವಾಗುತ್ತದೆ. ಹನ್ನೆರಡು ತಿಂಗಳುಗಳ ಬಳಿಕ ಅವನು ಮರಳಿ ಬರುತ್ತಾನೆ. ಈ ಹನ್ನೆರಡು ತಿಂಗಳು ಪ್ರೇಯಸಿ ವಿರಹದಿಂದ ಬಳಲುತ್ತಾಳೆ. ವೇದನೆಯನ್ನು ಹೇಳಿಕೊಳ್ಳುತ್ತಾಳೆ. ಈ ಕಾವ್ಯದ ವೈಶಿಷ್ಟ್ಯವೆಂದರೆ ವಿರಹಿಣಿಯ ಬಾಯಿಯಿಂದಲೇ ಕವಿಗಳು ಕಾವ್ಯವನ್ನು ಹೇಳಿಸುತ್ತಾರೆ. ಆಕೆ ಪ್ರತಿತಿಂಗಳ ಮತ್ತು ಪ್ರತಿ ಋತುವನ್ನು ವರ್ಣಿಸುತ್ತ ನಲ್ಲನ ವಿರಹದಲ್ಲಿ ಬೇಯುತ್ತಾಳೆ. ಪ್ರತಿ ತಿಂಗಳಲ್ಲಿ ಬರುವ ಹಬ್ಬ, ಹುಣ್ಣಿಮೆ, ಜಾತ್ರೆ, ಉತ್ಸವ ಮೊದಲಾದವುಗಳನ್ನು ಹೇಳುತ್ತ ನಲ್ಲನಿಲ್ಲದೆ ನಾನು ಹೇಗೆ ಈ ಉತ್ಸವಗಳಲ್ಲಿ ಭಾಗಿಯಾಗಲಿ ಎಂದು ಕೊರಗುತ್ತಾಳೆ. ಹನ್ನೆರಡು ತಿಂಗಳು ಮುಗಿದು ಪ್ರಿಯನು ಮನೆಗೆ ಬಂದಾಗ ಅವಳ ಹಿಗ್ಗಿನ ಬುಗ್ಗೆ ಚಿಮ್ಮುತ್ತದೆ.

ಬಾರಮಾಸ ಜಾನಪದ ಕಾವ್ಯ; ಲೋಕಗೀತೆ, ವಿರಹ ವರ್ಣನೆ, ಋತುವರ್ಣನೆ, ಮತ್ತು ಶೃಂಗಾರ(ವಿಪ್ರಲಂಭ ಶೃಂಗಾರ) ರಸಗಳ ಜೊತೆಗೆ ಪರಿಸರ, ನೆರೆಹೊರೆಯ, ಸಾಮಾಜಿಕ ಜೀವನದ ಸುಂದರ ಚಿತ್ರಣವನನ್ನು ಈ ಕಾವ್ಯದಲ್ಲಿ ಕಾಣಬಹುದು. ಪ್ರತಿಮೆ, ಸಂಕೇತ, ಉಪಮೆ ಮತ್ತು ರೂಪಕಗಳ ಸಮರ್ಥ ಬಳಕೆ ಬಾರಮಾಸ ಕಾವ್ಯದಲ್ಲಿ ಅತ್ಯವಶ್ಯ.

ಸಂಸ್ಕೃತದಲ್ಲಿ ಬಾರಮಾಸ ಕಾವ್ಯವಿಲ್ಲ. ಇದರ ಗಂಗೋತ್ರಿಯಾದ ಹಿಂದಿಯಲ್ಲಿ ಅಗಣಿತ ಬಾರಮಾಸಗಳಿವೆ. ಹೆಸರಾಂತ ಹಿಂದಿ ಕವಿ

ಮಲಿಕ್‌ಮಹಮ್ಮದ್ ಜಾಯಸ್ ತನ್ನ ಲೋಕ ಪ್ರಸಿದ್ಧವಾದ 'ಪದಮಾವತ್' ಕಾವ್ಯದಲ್ಲಿ ನಾಗಮತಿಯ ವಿಯೋಗದ ವರ್ಣನೆಯನ್ನು ಬಾರಮಾಸದ ಮೂಲಕವೇ ಮಾಡಿದ್ದಾನೆ.* ಈ ಬಾರಮಾಸದ ಭಾಷೆ 'ಅವಧಿ' ಎಂದು ಡಾ. ತನ್ವೀರ್ ಅಲ್ವಿ ಹೇಳುತ್ತಾರೆ. ಜಾಯಸ್ ಕವಿ ಜನಪದ ಗೀತೆಗಳ ಮಾಧುರ್ಯಕ್ಕೆ ಮಾರು ಹೋಗಿ ಬಾರಮಾಸವನ್ನು ವಿರಹದರ್ಶನವಾಗಿ ಬಳಸಿರಬಹುದು. ಸೇನಾಪತಿ ಕವಿಯ ಬಾರ ಮಾಸ ಗೀತೆಗಳು ಅತ್ಯಂತ ಸುಂದರವಾಗಿವೆ. ಹದಿನಾಲ್ಕನೆಯ ಶತಮಾನದ ಬೈಸಲ್ ದೇವರಾಸ್ ಮತ್ತು ಹದಿನೈದನೆಯ ಶತಮಾನದ ಗಣಪತ್ ಕವಿಯ ಬಾರಮಾಸ ಕಾವ್ಯಗಳು ಲೋಕಪ್ರಸಿದ್ಧವಾಗಿವೆ. ಗುಜರಾತಿನಲ್ಲಿ ಇದಕ್ಕೆ 'ಬಾರಮಾಸಿ' ಎನ್ನುತ್ತಾರೆ. ಬಂಗ್ಲಾ, ಬ್ರಿಜ್, ಅವಧಿ, ಮೈಥಿಲಿ, ಮಾಲವಿ, ಭೋಜಪುರಿ - ಎಲ್ಲ ಭಾಷೆಗಳಲ್ಲಿಯೂ ಬಾರಮಾಸ ಲೋಕಗೀತೆಗಳೇ ಆಗಿವೆ. ಈ ಪರಂಪರೆ ಮುಂದುವರೆದು ಜೈನ ಬಾರಮಾಸಗಳು ಸುಮಾರು ಹನ್ನೊಂದನೆಯ ಶತಮಾನದಲ್ಲಿ ಸೃಷ್ಟಿಯಾಗಿವೆ; ಇವುಗಳದೇ ಒಂದು ಪ್ರತ್ಯೇಕ ವೈಶಿಷ್ಟ್ಯವಿದೆ.

ಉರ್ದುಕಾವ್ಯದಲ್ಲಿ ಬಾರಮಾಸ ಜನಪ್ರಿಯವಾಗಿದೆ. ೩೫೦ ವರ್ಷ ಹಿಂದಿನಿಂದ ಈ ಕಾವ್ಯ ಉರ್ದು ಭಾಷೆಯಲ್ಲಿ ಬೆಳೆಯುತ್ತ ಬಂದಿದೆ. ಹನ್ನೆರಡು ಕವಿಗಳ ಬಾರಮಾಸಗಳನ್ನು ವಿಸ್ತೃತವಾದ ಪ್ರಸ್ತಾವನೆಯೊಂದಿಗೆ ತನ್ವೀರ್ ಅಲ್ವಿಯವರು ಸಂಪಾದಿಸಿದ್ದಾರೆ; ಅದನ್ನು ದಿಲ್ಲಿಯ ಉರ್ದು ಅಕಾಡೆಮಿ ಪ್ರಕಟಿಸಿದೆ. 'ಬಾರಹ ಮಾಸೇಕಿ ರಿವಾಯತ್ ಮುತಾಲಹ ವೊ ಮತನ್' ಇದು ಆ ಸಂಗ್ರಹದ ಹೆಸರು. ಈ ಬಾರಮಾಸಗಳು ಕಾವ್ಯದ ದೃಷ್ಟಿಯಿಂದ ಉತ್ಕೃಷ್ಟ ರಚನೆಯಾಗಿವೆ. "ಈ ಕಾವ್ಯಗಳು ಲೋಕ ಸಾಹಿತ್ಯ (ಗೀತ) ಪರಂಪರೆಯಲ್ಲಿ ಬೆಳೆದು ಬಂದಿವೆ. ಇವು ಸಂಕ್ಷಿಪ್ತ ಗೀತಗಳಾಗಿಲ್ಲ; ಅವು ಸ್ವತಂತ್ರವಾಗಿ ಮತ್ತು ಸಂಪೂರ್ಣವಾಗಿ ಪ್ರೇಮಕಾವ್ಯಗಳೇ ಆಗಿವೆ."[೧] ಉರ್ದು ಕವಿಗಳು ಹಿಂದಿಯಿಂದ ಪ್ರಭಾವಿತರಾಗಿರಬಹುದು. ಆದರೆ ಅವರ ಕಾವ್ಯಗಳು ಹಿಂದಿ ಕಾವ್ಯಗಳ

---

* "ಉರ್ದುಮೆ ಬಾರಹ ಮಾಸೇಕಿ ರಿವಾಯತ್, ಮುತಾಲಹ ವೊ ಮತನ್" ಸಂ: ತನ್ವೀರ್ ಅಲ್ವಿ ಪ್ರ: ಉರ್ದು ಅಕಾಡೆಮಿ, ದಿಲ್ಲಿ, ಪುಟ ೨೯.

೧. ಅದೇ ಪುಟ ೫೪ (ಅವಧಿ, ರಾಜಸ್ಥಾನಿ, ಪಂಜಾಬಿ ಮುಂತಾದ ಭಾಷೆಗಳ ಪ್ರಬಂಧ ಕಾವ್ಯಗಳಲ್ಲಿ ಬಾರಮಾಸಗಳು ಒಂದು ಭಾಗವಾಗಿವೆ. ಉರ್ದುವಿನಂತೆ ಸ್ವತಂತ್ರ ಕಾವ್ಯಗಳಲ್ಲ)

ಪಡಿಯಚ್ಚಲ್ಲ. ಈ ಕವಿಗಳು ತಮ್ಮದೇ ಆದ ಒಂದು ಅನನ್ಯ ಶೈಲಿಯನ್ನು ಸೃಷ್ಟಿಸಿಕೊಂಡಿದ್ದಾರೆ. ಮುಸಲ್ಮಾನ ಧರ್ಮದ ಸಂಪ್ರದಾಯ ಅವರ ಕಾವ್ಯಗಳಲ್ಲಿ ಅಲ್ಲಲ್ಲಿ ಕಂಡು ಬಂದರೂ ಹಿಂದು ವೈದಿಕ ಸಂಪ್ರದಾಯವನ್ನೇ ಈ ಕವಿಗಳು ಬಳಸಿದ್ದಾರೆ. ಹಿಂದು ಧರ್ಮದ ಹಬ್ಬ, ಹುಣ್ಣಿಮೆ, ಉತ್ಸವಗಳನ್ನು ಸುಂದರವಾಗಿ ಲೀಲಾಜಾಲವಾಗಿ ವರ್ಣಿಸುತ್ತಾರೆ. ಪೌರಾಣಿಕ ಪ್ರತಿಮೆಗಳನ್ನು ಇವರ ಕಾವ್ಯಗಳ ತುಂಬ ಕಾಣಬಹುದು. ಅಫಜಲ್ ಕವಿಯಂತೂ ತನ್ನನ್ನು 'ಗೋಪಾಲ'ನೆಂದೇ ಕರೆದುಕೊಂಡಿದ್ದಾನೆ."ಇದು (ಕಾವ್ಯ) ತನ್ನ ಕಥೆಯೂ ಅಹುದು - ಲೋಕಕಥೆಯೂ ಅಹುದು. ಇದಕ್ಕೆ ಮರೆಮಾಚಿ ಹೇಳುವ ಉಪಮೆ, ರೂಪಕ ಮುಂತಾದವುಗಳ ಆವಶ್ಯಕತೆಯಿಲ್ಲ. ಇದು ಅಫಜಲ್‌ನ ಪ್ರೀತಿಯ ಕಥೆಯಾಗಿದೆ. ಇದು ಗೋಪಾಲನ ಪ್ರೇಮ ಕಥೆಯಾಗಿದೆ."[೨]

ಉರ್ದು ಕವಿಗಳಲ್ಲಿ ಅನೇಕರು ಸೂಫಿತತ್ವದ ಅನುಯಾಯಿಗಳು. ಆದುದರಿಂದ ಸೂಫಿ ಪಂಥದ ಸೂಕ್ಷ್ಮವಿಚಾರಗಳು, ತತ್ವ ಜಿಜ್ಞಾಸೆಗಳು ಇವರ ಬಾರಮಾಸಗಳಲ್ಲಿ ಹಾಸುಹೊಕ್ಕಾಗಿವೆ. ಈಗ ದೊರಕಿದ ಬಾರಮಾಸಗಳಲ್ಲಿ ಅಫಜಲ್ ಕವಿಯ 'ಬಕಟ್ ಕಹಾನಿ'ಯೇ ಹಳೆಯದು. ಈ ಕವಿಯ ಕಾಲ ಕ್ರಿ.ಶ. ೧೬೫೮. ೩೫೦ ವರ್ಷದ ಪರಂಪರೆ ಈ ಕಾವ್ಯಕ್ಕೆ ಇದೆಯೆಂದ ಬಳಿಕ ಅಫಜಲ್‌ನಿಗಿಂತ ಹಿಂದೆ ಬಾರಮಾಸಗಳು ಸೃಷ್ಟಿಯಾಗಿರಬೇಕೆಂದು ಭಾವಿಸಿದರೆ ತಪ್ಪೇನಲ್ಲ.

ಬಾರಮಾಸ ವಿಪ್ರಲಂಭ ಶೃಂಗಾರಕ್ಕೆ ಮೀಸಲಾದ ಕಾವ್ಯ. ಮಳೆ, ಬಿಸಿಲು, ಗಾಳಿ, ಚಳಿ, ಹೂ, ಚಿಗುರು, ವಸಂತ, ಶಿಶಿರ, ಮಾವು, ಆಲ, ಬೋರೆ, ಮೋಡ, ನೆಲ ಮುಂತಾದ ಸೃಷ್ಟಿಯ ವಿವಿಧತೆಯೊಂದಿಗೆ ವಿರಹಿಣಿ ತನ್ನ ವಿಯೋಗ ದುಃಖವನ್ನು ಬೆರೆಸಿ ಹೇಳುವ ಕೌಶಲ್ಯಕ್ಕೆ ಮತ್ತು ಹಬ್ಬ ಹುಣ್ಣಿವೆಗಳಲ್ಲಿ ತನ್ನ ದುಃಖವನ್ನು ತೋಡಿಕೊಳ್ಳುತ್ತ ಒಂದು ಸಾಮಾಜಿಕ ಪರಿಸರವನ್ನು ನಿರ್ಮಿಸುವ ಜಾಣ್ಮೆಗೆ ಮಾರು ಹೋಗದವರಿಲ್ಲ. ಹಿಂದೆ ಹೇಳಿದಂತೆ ಇಂಥ ವಿಪ್ರಲಂಭ ಕಾವ್ಯ ಆತ್ಮಕಥನವೂ ಆಗಬಹುದು; ಲೋಕಕಥನವೂ ಆಗಬಹುದು.

---

೨. ಅದೇ ಪುಟ ೧೬, ೧೬.

ಬಾರಮಾಸ ಉಜಲತ್‌ನಲ್ಲಿ "ಈ ಬಾರಮಾಸದಲ್ಲಿ 'ಕನ್ಹಯ್ಯ' ಪ್ರೀತಿ ಮೋಹಗಳ ಒಂದು ಅಮರ ಸಂಕೇತವಾದುದರಿಂದ ಇದು ರಾಧೆಯ ಪ್ರೇಮ ಕಾವ್ಯವಾಗಿದೆ"[೧] ಎನ್ನುತ್ತಾರೆ. ಡಾ. ತನ್ವೀರ್ ಅಲ್ವಿಯವರು. ಈ ಮಾತು ಅನೇಕ ಬಾರಮಾಸಗಳಿಗೆ ಅನ್ವಯಿಸುತ್ತದೆ. ಯಾಕೆಂದರೆ ಕೃಷ್ಣರಾಧೆಯರೇ ಹೆಚ್ಚಾಗಿ ಬಾರ ಮಾಸ ಕಾವ್ಯಗಳ ನಾಯಕ ನಾಯಕಿಯರಾಗಿದ್ದಾರೆ. ಈಗ ನಮ್ಮ ಸಂಪಾದನೆಯ ಕನ್ನಡ ಬಾರಮಾಸವಂತೂ ಕೃಷ್ಣರಾಧೆಯರ ಪ್ರೇಮ ಕಥೆಯೇ ಆಗಿದೆ.

## ಕನ್ನಡ ಬಾರಮಾಸಗಳು

ಕನ್ನಡದಲ್ಲಿ ಎರಡು ಬಾರಮಾಸ ಕಾವ್ಯಗಳು ದೊರಕಿವೆ. (೧) ಕಲ್ಲೂರಿನ ಧೂಪದ ಲಿಂಗಣ್ಣ ಕವಿಯ ಬಾರಮಾಸ; ಈತನ ಕಾಲ ಕ್ರಿ.ಶ. ೧೬ನೆಯ ಶತಮಾನದ ಪೂರ್ವಾರ್ಧ. (೨) ನಿತ್ಯಾನಂದೇಶ್ವರ ಬಾರಮಾಸ. ಈ ಕವಿಯ ಹೆಸರು ಕಾಲ ತಿಳಿದು ಬಂದಿಲ್ಲ. ಈ ಬಾರಮಾಸದ ನಾಲ್ಕು ಪ್ರತಿಗಳು ಉಪಲಬ್ಧವಿವೆ. ಲಿಂಗಣ್ಣನ ಬಾರಮಾಸ ವೈದಿಕ ಧರ್ಮಕ್ಕೆ ಸಂಬಂಧಪಟ್ಟುದಾದರೆ ನಿತ್ಯಾನಂದೇಶ್ವರ ಬಾರಮಾಸ ವೀರಶೈವ ಧರ್ಮಕ್ಕೆ ಸಂಬಂಧಪಟ್ಟುದಾಗಿದೆ.

ಡಾ. ತನ್ವೀರ್ ಅಲ್ವಿಯವರು ತಮ್ಮ "ಉರ್ದುಮೆ ಬಾರಾ ಮಾಸೇಕಿ ರಿವಾಯತ್, ಮುತಾಲಹ ವೊ ಮತನ್" ಎಂಬ ಗ್ರಂಥದಲ್ಲಿ ಉತ್ತರ ಹಿಂದುಸ್ಥಾನದ ಉರ್ದು ಮತ್ತು ಇತರ ಭಾಷೆಗಳಲ್ಲಿ ಇರುವ ಬಾರಮಾಸಗಳನ್ನು ಕುರಿತು ಚರ್ಚಿಸುತ್ತಾರೆ. ದಕ್ಷಿಣ ಹಿಂದುಸ್ಥಾನದ ಬಗ್ಗೆ ಏನೂ ಹೇಳುವುದಿಲ್ಲ. ದಕ್ಷಿಣದ ಉರ್ದು ಭಾಷೆಯಲ್ಲಿಯೂ ಬಾರಮಾಸಗಳು ರಚಿತವಾಗಿಲ್ಲವೆಂಬುದು ಅವರ ತಿಳಿವಳಿಕೆಯಾಗಿದೆ; ಇದು ಸತ್ಯವೂ ಹೌದು. ಆದರೆ ಒಂದಿಬ್ಬರು ಉತ್ತರದ ಬಾರಮಾಸ ಕವಿಗಳು ದಕ್ಷಿಣದ ಔರಂಗಾಬಾದ ಮತ್ತು ಇತರ ಸ್ಥಳಗಳಿಗೆ ಬಂದುದನ್ನು ಉಲ್ಲೇಖಿಸುತ್ತಾರೆ.

ದಕ್ಷಿಣದ ಭಾಷೆಗಳಲ್ಲಿ ಬಾರಮಾಸ ಕಾವ್ಯಗಳು ಸೃಷ್ಟಿಯಾದುದು ನನಗೂ ತಿಳಿಯದು. ಕನ್ನಡದ ಸೋದರ ಭಾಷೆಗಳ ವಿದ್ವಾಂಸರನ್ನು ಸಂಪರ್ಕಿಸಿ ಈ ವಿಷಯ

---

೧. ಅದೇ ಪುಟ ೬೫.

ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ; ಇದಕ್ಕೆ ಸಮಯದ ಅಭಾವವು, ಅಷ್ಟೆ. ಮುಂದೆ ದಕ್ಷಿಣ ಭಾರತದ ಭಾಷೆಗಳ ವಿದ್ವಾಂಸರನ್ನು ಸಂಪರ್ಕಿಸಿ ಈ ಕೆಲಸವನ್ನು ಮುಂದುವರಿಸುವೆ. ಕನ್ನಡದಲ್ಲಿ ಬಾರಮಾಸಗಳು ರಚನೆಯಾಗಿವೆಯೆಂದ ಮೇಲೆ ಇದರ ಸೋದರ ಭಾಷೆಗಳಲ್ಲಿಯೂ ಬಾರಮಾಸಗಳ ಪರಂಪರೆ ಇರಬಹುದು.

ಕನ್ನಡದಲ್ಲಿ ಎರಡು ಬಾರಮಾಸಗಳು ಸೃಷ್ಟಿಯಾದ ಕಾಲದಲ್ಲಿ ಈ ಕವಿಗಳು ಬದುಕಿದ ನಾಡು ಬಹುಮಟ್ಟಿಗೆ ಮುಸಲ್ಮಾನ ದೊರೆಗಳ ಆಡಳಿತಕ್ಕೆ ಒಳಪಟ್ಟಿತ್ತು. ಆಡಳಿತ ಭಾಷೆ ಫಾರ್ಸಿಯಾಗಿತ್ತು. ಹಿಂದಿಯು ಬಳಕೆಯಲ್ಲಿದ್ದು ಅದಕ್ಕೆ 'ಹಿಂದವಿ' ಎನ್ನುತ್ತಿದ್ದರು. ಅಲ್ಲದೆ ದಖನಿ (ಉರ್ದು) ಭಾಷೆಯು ಸಂಪದ್ಭರಿತವಾಗಿ ಬೆಳೆದು ಅದರಲ್ಲಿ ಕಾವ್ಯ, ಗದ್ಯ ಕೃತಿಗಳು ಸೃಷ್ಟಿಯಾಗಿದ್ದುವು. ಗೋಲ್ಕೊಂಡ, ಬೀದರ್, ವಿಜಾಪುರ ಮುಂತಾದ ಬಾದಷಾಹರ ಓಲಗಗಳಲ್ಲಿ ಉರ್ದುಕವಿಗಳಿಗೆ ಮಾನ್ಯತೆ ಮತ್ತು ಪ್ರೋತ್ಸಾಹ ಇದ್ದುದೊಂದೇ ಅಲ್ಲದೆ ಸ್ವತಃ ಬಾದಷಾಹರೇ ಕವಿಗಳಾಗಿದ್ದರು. ಗೋಲ್ಕೊಂಡಾದ ಕುಲಿಕುತುಬ್ ಷಾಹ ಉರ್ದು ಕಾವ್ಯದ ವಿಶಿಷ್ಟ ಪ್ರಕಾರವಾದ ಗಜಲಿನ ಪ್ರಪ್ರಥಮ ದಕ್ಷಿಣದ ಕವಿ. ವಲಿ ಔರಂಗಾಬಾದಿ ಶ್ರೇಷ್ಠ ಗಜಲ್ ಕವಿ; ಇವನು ದಿಲ್ಲಿಗೆ ಹೋದ ಬಳಿಕವೇ ಇವನಿಂದ ಗಜಲ್ ಕಾವ್ಯದ ಒಂದು ಹೊಸ ವಿಶಿಷ್ಟ ವಾತಾವರಣ ಸೃಷ್ಟಿಯಾಗಿ ಅಲ್ಲಿಯ ಕವಿಗಳಿಗೆ ಮಾದರಿಯಾಯಿತು. ವಿಜಾಪುರದ ಇಬ್ರಾಹಿಮ್ ಆದಿಲ್ ಷಾಹ ಸಾನಿ ಶ್ರೇಷ್ಠ ಕವಿಯೂ ಸಂಗೀತ ಪ್ರಿಯನೂ ಆಗಿದ್ದನು. ಕನ್ನಡ, ಮರಾಠಿ, ಉರ್ದು, ಫಾರ್ಸಿ ಮುಂತಾದ ಅನೇಕ ಭಾಷೆಗಳು ಅವನಿಗೆ ಪರಿಚಿತವಿದ್ದುವು. ಸಾಹಿತ್ಯ ಮತ್ತು ಕಲೆಗಳಿಗೆ ಅವನು ನೀಡಿದ ಪ್ರೋತ್ಸಾಹ ಎಲ್ಲ ಕಾಲಕ್ಕೂ ಆದರ್ಶನೀಯವಾದುದು. ನವರಸಪುರವೆಂಬ ಒಂದು ಹೊಸರಾಜಧಾನಿಯನ್ನು ವಿಜಾಪುರದ ಪಶ್ಚಿಮಕ್ಕೆ ನಾಲ್ಕು ಕಿಲೋಮೀಟರ್ ದೂರದಲ್ಲಿ ನಿರ್ಮಿಸಿ ಅದರಲ್ಲಿ ಸಂಗೀತ ಗೋಷ್ಠಿಗಾಗಿಯೇ ಒಂದು ಸುಂದರ ಸಂಗೀತ ಮಹಲನ್ನು ಕಟ್ಟಿಸಿದನು. ಇವನಿಗೆ ಜಗದ್ಗುರುವೆಂಬ ಅಭಿದಾನವೂ ಇತ್ತು. ದಕ್ಷಿಣದಲ್ಲಿ ಈ ಬಾದಷಾಹರ ಆಶ್ರಯದಲ್ಲಿ ಉರ್ದು ಸುಪುಷ್ಟವಾಗಿ ಬೆಳೆದರೂ ಬಾರಮಾಸ ಕಾವ್ಯ ಪ್ರಕಾರ ಇಲ್ಲಿ ಸೃಷ್ಟಿಯಾಗಲಿಲ್ಲ. ಮುನ್ನೂರಾ ಐವತ್ತು ವರ್ಷಗಳ ಹಿಂದಿನಿಂದ ಬಾರಮಾಸ ಕಾವ್ಯ

ಉರ್ದುವಿನಲ್ಲಿ ಸೃಷ್ಟಿಯಾಗಿದೆಯೆಂದು ತನ್ವೀರ್ ಅಲ್ವಿಯವರು ಹೇಳುತ್ತಾರೆ. ಇದೇ ಕಾಲಕ್ಕೆ ಅಂದರೆ ಕ್ರಿ. ಶ. ೧೬೪೦ ರಲ್ಲಿ ಕಲ್ಲೂರ ಲಿಂಗಣ್ಣನಿಂದ ಕನ್ನಡದಲ್ಲಿ ಬಾರಮಾಸ ರಚನೆಯಾಗಿದೆ. ಈತನ ಕಾವ್ಯದ ಪ್ರೌಢಿಮೆಯನ್ನು ನೋಡಿದರೆ ಕನ್ನಡದಲ್ಲಿ ಈತನಿಗಿಂತ ಬಹು ಹಿಂದೆಯೇ ಈ ಬಾರಮಾಸ ಕಾವ್ಯ ಪರಂಪರೆ ಬೆಳೆದು ಬಂದಿರಬೇಕೆಂದು ಊಹಿಸಲು ಅವಕಾಶವಿದೆ. ಈ ಕವಿ ಉರ್ದು ಬಾರಮಾಸಗಳನ್ನು ನೋಡಿದಂತೆ ಕಂಡು ಬರುವುದಿಲ್ಲ. ಯಾಕೆಂದರೆ ದಕ್ಷಿಣದಲ್ಲಿ ಉರ್ದು ಬಾರಮಾಸಗಳ ರಚನೆಯಾಗಿಯೇ ಇಲ್ಲ. ಉತ್ತರ ಭಾರತದ ಉರ್ದು ಬಾರಮಾಸದ ಉಜಲತ್ ಮುಂತಾದ ಒಂದಿಬ್ಬರು ಕವಿಗಳು ದಕ್ಷಿಣಕ್ಕೆ ಬಂದದ್ದುಂಟು. ಆದರೆ ಅವರು ಇಲ್ಲಿಗೆ ಬಂದುದು ಲಿಂಗಣ್ಣ ಕವಿಯ ತರುವಾಯ; ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ. ಲಿಂಗಣ್ಣ ಕವಿಗೆ ಉರ್ದು ಮತ್ತು ಫಾರ್ಸಿ ಭಾಷೆಗಳ ಪರಿಚಯವಿರಬೇಕು. ಇದಕ್ಕೆ ಅವನ ಕಾವ್ಯದಲ್ಲಿ ನಮಗೆ ಆಧಾರಗಳು ದೊರಕುವುದಿಲ್ಲ. ಆದರೆ ಕಲ್ಲೂರಿನ ಮಹಾಜನರು ಅವನಿಗೆ ಕೊಟ್ಟ ಎರಡು ದಾನ ಪತ್ರಗಳಲ್ಲಿ ಈ ಭಾಷೆಗಳ ಕೆಲವು ಶಬ್ದಗಳು ಬಳಕೆಯಾಗಿವೆ. ಸಾಮಾನ್ಯವಾಗಿ ಆ ಕಾಲದಲ್ಲಿ ಈ ಪ್ರದೇಶದ ಜನರಿಗೆ ಉರ್ದು ಮತ್ತು ಫಾರ್ಸಿಗಳ ಪರಿಚಯವಿತ್ತೆಂದು ಹೇಳಬಹುದು.

ಕಲ್ಲೂರು ಲಿಂಗಣ್ಣವೊಡೆಯ ತನ್ನ ಕಾವ್ಯಕ್ಕೆ ಕೇವಲ 'ಬಾರಮಾಸ' ವೆಂದು ಕರೆದಿದ್ದಾನೆ. ಆದರೆ ಎರಡನೆಯ ಬಾರಮಾಸದ ಕವಿ ತನ್ನ ಕಾವ್ಯಕ್ಕೆ 'ನಿತ್ಯಾನಂದೇಶ್ವರ ಬಾರಮಾಸದ ಪಾರಿಜಾತ' ಎಂದು ಕರೆದುಕೊಂಡಿದ್ದಾನೆ. ಇದು ಸ್ವಲ್ಪ ನನ್ನನ್ನು ಗೊಂದಲಕ್ಕೀಡುಮಾಡಿತು. ಈ ಕಾವ್ಯ ಪಾರಿಜಾತಕ್ಕೆ ಸಂಬಂಧಪಟ್ಟುದೂ ಅಲ್ಲ ಮತ್ತು ನಾಟಕವೂ ಅಲ್ಲ. ಕವಿ ಇದಕ್ಕೆ ಪಾರಿಜಾತವೆಂದು ಯಾಕೆ ಕರೆದಿದ್ದಾನೆ? ಆದರೆ ಇದರ ರಹಸ್ಯ ನನಗೆ ಡಾ. ಚಂದ್ರಶೇಖರ ಕಂಬಾರರಿಂದ ತಿಳಿಯಿತು. ಜಾನಪದ ತಜ್ಞರಾದ ಅವರ ಮನೆಯಲ್ಲಿ ಕುಳಿತು ಈ ವಿಷಯ ಕುರಿತು ಚರ್ಚಿಸಿದಾಗ ಅವರಿಂದ ಅನೇಕ ಹೊಸ ವಿಚಾರಗಳು ತಿಳಿದುವು: "ಪಾರಿಜಾತ ನಾಟಕ ಮತ್ತು ಆ ಕಥೆ ನಮ್ಮ ಜನರ ಜೀವನದಲ್ಲಿ ಹಾಸು ಹೊಕ್ಕಾಗಿವೆ. ಪಾರಿಜಾತದ ಆಟದ ಪ್ರಭಾವ ಎಷ್ಟರ ಮಟ್ಟಿಗೆ ಆಗಿದೆಯೆಂದರೆ ಪಾರಿಜಾತದ ವಿಷಯ ಇಲ್ಲದ ಆಟಗಳಿಗೂ ಆ ಹೆಸರನ್ನು ಇಡಲಾಗಿದೆ.

ಉದಾಹರಣೆಗಾಗಿ 'ಶಿವಪಾರಿಜಾತ'[೧]. ಇದರಂತೆ ಅನೇಕ ಕವಿಗಳು ತಮ್ಮ ಜಾನಪದ ಕಾವ್ಯಕ್ಕೆ ಪಾರಿಜಾತವೆಂದು ಹೆಸರಿಟ್ಟುಕೊಂಡಿರುವ ಸಾಧ್ಯತೆಗಳಿವೆ. ನಿತ್ಯಾನಂದೇಶ್ವರ ಬಾರಮಾಸ ಅಂಥ ಕಾವ್ಯಗಳಲ್ಲಿ ಒಂದಾಗಿದೆಯೆಂದು ಭಾವಿಸಬಹುದು. ಈ ಕಾವ್ಯಗಳು ಹಾಡುಗಬ್ಬಗಳಾಗಿರುವುದರಿಂದ ಜನರು ಖುಷಿಯಿಂದ ಹಾಡುತ್ತಿದ್ದರು. ಲಿಂಗಣ್ಣನ ಬಾರಮಾಸದ ೪೨ನೆಯ ಪದ್ಯದಲ್ಲಿ ಈ ಬಾರಮಾಸವನ್ನು ವಿಶ್ವಾಸದಿಂದ ಹೇಳುವವರಿಗೆ, ಲಾಲಿಸುವವರಿಗೆ ಮತ್ತು ವಿಸ್ತಾರ ಮಾಡುವವರಿಗೆ ಪಂಕೇರುಹನಾಭ ಬೇಡಿದ ಇಷ್ಟಾರ್ಥವನ್ನು ಕೊಡುತ್ತಾನೆ ಎಂದು ಕವಿ ಹೇಳಿದ್ದು ಅರ್ಥಪೂರ್ಣವಾಗಿದೆ. ಇಂಥ ಕಾವ್ಯಗಳನ್ನು ಸ್ವತಃ ಹಾಡುವುದಲ್ಲದೆ ಅವುಗಳ ಪ್ರಚಾರ ಪ್ರವಚನ ಮಾಡುತ್ತಿದ್ದರು. ಶ್ರವ್ಯ ಕಾವ್ಯಗಳು ಮುಂದೆ ದೃಶ್ಯಕಾವ್ಯಗಳು ಆಗುವ ಸಂಭವವಿತ್ತೆಂದು ನಾವು ಊಹಿಸಲು ಸಾಧ್ಯವಿದೆ. ನಾಟಕಗಳು ಮೊದಲು ಶ್ರವ್ಯವಾಗಿದ್ದು ಮುಂದೆ ದೃಶ್ಯಕಾವ್ಯಗಳಾದ ಸಂಪ್ರದಾಯವಂತೂ ಇದ್ದೇ ಇದೆ."

ಡಾ. ಚಂದ್ರಶೇಖರ ಕಂಬಾರರು ಮೇಲೆ ಹೇಳಿದ ವಿಚಾರಗಳು ನನ್ನ ನೆನಪಿನ ಪದರುಗಳನ್ನು ಬಿಚ್ಚಿದವು. ನಮ್ಮ ರಾಯಚೂರು ಸೀಮೆಯವನೇ ಆದ ಅಪರಾಳ ತಮ್ಮಣ್ಣನ 'ಶ್ರೀ ಕೃಷ್ಣ ಪಾರಿಜಾತ' ವನ್ನು ಕುರಿತು ದಿ. ಯೋಗನೂರು ಸುಬ್ಬಾರಾವ ಕುಲಕರ್ಣಿಯವರು ಹೇಳುತ್ತಿದ್ದ ಮಾತುಗಳು ನೆನಪಿಗೆ ಬಂದುವು. ಕುಲಕರ್ಣಿಯವರು ಬಯಲಾಟದ ಪ್ರಸಿದ್ಧ ನಾಯಕರಾಗಿದ್ದರು. ನೂರಾರು ಬಯಲಾಟಗಳನ್ನಾಡಿಸಿ ಈ ಭಾಗದಲ್ಲಿ ಬಯಲಾಟದ ಪರಂಪರೆಯನ್ನು ಉಳಿಸಿ ಬೆಳೆಸಿದವರು ಅವರು. ೧೯೭೭ ರಲ್ಲಿ ಕಾಲವಶರಾದ ಅವರಿಗೆ ಆಗ ೮೫ ಕ್ಕಿಂತಲೂ ಹೆಚ್ಚು ವರ್ಷಗಳಾಗಿದ್ದುವು. ಅಪರಾಳ ತಮ್ಮಣ್ಣನ ಸಮಕಾಲೀನರಲ್ಲಿ ಕೆಲವರನ್ನು ನೋಡಿ ಅವರಿಂದ ಸ್ಫೂರ್ತಿ ಪಡೆದಿರುವೆನೆಂದು ಸುಬ್ಬಾರಾವ ಕುಲಕರ್ಣಿಯವರು ಹೇಳುತ್ತಿದ್ದರು. ಅಪರಾಳ ತಮ್ಮಣ್ಣನು ತನ್ನ ಶ್ರೀ ಕೃಷ್ಣಪಾರಿಜಾತವನ್ನು ತಾನೇ ತನ್ನ ಮಕ್ಕಳು ಬಂಧುಗಳೊಡನೆ ಪ್ರಯೋಗಿಸಿದ್ದನ್ನು, ಅವರಿಗೆ ಬಹಿಷ್ಕಾರ ಹಾಕಿದ್ದನ್ನು, ಬಹಿಷ್ಕಾರ ತೆಗೆದುದನ್ನು ಮತ್ತು ಇಲ್ಲಿಯ ಜನರ ಕಾಟ ತಾಳದೆ

---

೧. ೧೮ನೆಯ ಶತಮಾನದ ಗೋಕಾಕದ ಅನಂತಾಚಾರ್ಯ ಶಿವಪಾರಿಜಾತವನ್ನು ಬರೆದಿದ್ದಾನೆ. ಇದರಲ್ಲಿ ಪಾರಿಜಾತದ ವಿಷಯವಿಲ್ಲ. ಇದರ ವಸ್ತು ಗಿರಿಜಾಕಲ್ಯಾಣ.

ಕನಕಗಿರಿಗೆ ಹೋಗಿ ಅಲ್ಲಿಯ ಬೇಡದೊರೆಯೊಬ್ಬನ ಆಶ್ರಯ ಪಡೆದುದನ್ನು ಯೋಗನೂರು ಕುಲಕರ್ಣಿಯವರು ವಿವರವಾಗಿ ಹೇಳುತ್ತಿದ್ದರು. ಅಲ್ಲದೆ ತಮ್ಮಣ್ಣನ ಕೃಷ್ಣಪಾರಿಜಾತವನ್ನು ಮನೆಮನೆಗಳಲ್ಲಿ ಓದುತ್ತಿದ್ದರು. ಪಾರಾಯಣ ಮಾಡುತ್ತಿದ್ದರು ಮತ್ತು ಪ್ರವಚನ ಮಾಡುತ್ತಿದ್ದರು ಎಂದು ಯೋಗನೂರು ಸುಬ್ಬಾರಾವ ಕುಲಕರ್ಣಿಯವರು. ಆರ್. ಜಿ. ಕುಲಕರ್ಣಿಯವರು ಶ್ರೀಕೃಷ್ಣ ಪಾರಿಜಾತವನ್ನು ಸಂಪಾದಿಸಿ ಪ್ರಕಟಿಸುವುದಕ್ಕೆ ಮುನ್ನವೇ ಹೇಳಿದ ಮಾತುಗಳು ನನಗೆ ನೆನಪಿವೆ. ಶ್ರೀಕೃಷ್ಣ ಪಾರಿಜಾತವನ್ನು ೧೯೭೨ ರಲ್ಲಿ ಸಂಪಾದಿಸಿ ಪ್ರಕಟಿಸಿದ ಆರ್. ಜಿ. ಕುಲಕರ್ಣಿಯವರು ಪ್ರಸ್ತಾವನೆಯ ಪುಟ ೮೫ ರಲ್ಲಿ "........ ಧಾರ್ಮಿಕ ದೃಷ್ಟಿಯಿಂದಲೂ ಹೆಣ್ಣುಮಕ್ಕಳಲ್ಲಿ ಇದರ ಪಠಣ ಪಾರಾಯಣ ಹಾಡುಗಾರಿಕೆ ಹುಚ್ಚೆದ್ದು ಬೆಳೆದಿದ್ದ ಕಾಲವೊಂದಿತ್ತು"- ಎಂದು ಹೇಳಿ ಮುಂದೆ ದಿ. ಕುಂ|| ಸೌ|| ಜೀಜಾಬಾಯಿ ವೆಂಕಟರಾವ ಜಹಾಗೀರದಾರರು ೧೮೭೦ರಲ್ಲಿ ಸಿದ್ಧಪಡಿಸಿದ ಹಸ್ತಪ್ರತಿಯನ್ನು ಅವರ ಚಿರಂಜೀವರಾಗಿದ್ದ ದಿ. ಶ್ರೀ ಕೃಷ್ಣರಾವ ಜಹಾಗೀರದಾರರಿಂದ ಆ ಪ್ರತಿ ತಮಗೆ ದೊರಕಿದ ವಿಷಯವನ್ನು ಹೇಳುತ್ತಾರೆ.

ನಿತ್ಯಾನಂದೇಶ್ವರ ಬಾರಮಾಸದ ಕವಿಯಾರು? ಆತನ ಕಾಲ ಯಾವುದು? ಆತನದು ಯಾವ ಊರು? - ಇದರ ಬಗ್ಗೆ ಏನೂ ತಿಳಿದುಬರುವುದಿಲ್ಲ. ನನಗೆ ದೊರಕಿದ ನಾಲ್ಕು ಪ್ರತಿಗಳಲ್ಲಿ ಕವಿಯ ಬಗ್ಗೆ ಯಾವ ಮಾಹಿತಿಯೂ ಇಲ್ಲ. ಆದರೆ ಈ ಕವಿ ಅಪರಾಳ ತಮ್ಮಣ್ಣ ಅಥವಾ ಕುಲಗೋಡ ತಮ್ಮಣ್ಣನ ತರುವಾಯ ಜೀವಿಸಿರಬಹುದೆಂದು ಹೇಳಲು ಯಾವ ಅಡ್ಡಿಯೂ ಇಲ್ಲ; ತನ್ನ ಕಾವ್ಯಕ್ಕೆ ಪಾರಿಜಾತ ಎಂದು ಹೆಸರಿಟ್ಟಿರುವುದೇ ಇದಕ್ಕೆ ಕಾರಣ.

ಕನ್ನಡದ ಎರಡು ಬಾರಮಾಸಗಳು ಬೇರೆ ಬೇರೆ ಸಂಪ್ರದಾಯಗಳಿಗೆ ಸೇರಿದುವೆಂದು ಈ ಮೊದಲೇ ಹೇಳಿದೆ. ಲಿಂಗಣ್ಣವೊಡೆಯನ ಬಾರಮಾಸ ಲೌಕಿಕ ಕಾವ್ಯವಾದರೆ ನಿತ್ಯಾನಂದೇಶ್ವರ ಬಾರಮಾಸ ಅಲೌಕಿಕ ಕಾವ್ಯ. ಲೌಕಿಕ ಮತ್ತು ಅಲೌಕಿಕ ಬಾರಮಾಸಗಳ ಒಂದು ಪರಂಪರೆ ಬೆಳೆದು ಬಂದಿದೆಯೆಂಬುದಕ್ಕೆ ಆಧಾರಗಳು ಇಲ್ಲದೇ ಇಲ್ಲ. ಹನ್ನೆರಡು ಮತ್ತು ಹದಿಮೂರನೆಯ ಶತಮಾನದ ಜೈನ ಸಾಧುಗಳ ಧರ್ಮ ತತ್ವ ಚಿಂತನೆಗಳು ಆ ಕಾಲದ ಬಾರಮಾಸಗಳಲ್ಲಿ ಉಕ್ತವಾಗಿವೆ. ಇವುಗಳಿಗೆ ಜೈನ ಬಾರಮಾಸಗಳೆಂದು ಕರೆಯುತ್ತಾರೆ. ಅಲ್ಲದೆ

ಉರ್ದು ಬಾರಮಾಸಗಳಲ್ಲಿ ಲೌಕಿಕ ಮತ್ತು ಅಲೌಕಿಕ (ಇಷ್ಕ್ ಮಜಾಜಿ ಮತ್ತು ಇಷ್ಕ್ ಹಕೀಕಿ) ಎಂಬ ಎರಡು ಬಗೆಯ ಪ್ರೀತಿಗಳಿವೆ. ಸೂಫಿ ಕವಿಗಳು ಅಲೌಕಿಕ ಪ್ರೇಮವನ್ನು ತಮ್ಮ ಕಾವ್ಯಗಳಲ್ಲಿ ವ್ಯಕ್ತಮಾಡುತ್ತಾರೆ. ಬಾರಮಾಸದ ಕವಿಗಳಲ್ಲಿಯೂ ಅನೇಕರು ಸೂಫಿ ಕವಿಗಳಿದ್ದಾರೆ. ಹೀಗೆ ಲೌಕಿಕ ಮತ್ತು ಅಲೌಕಿಕ ಎಂಬ ಎರಡು ಬಗೆಯ ಬಾರಮಾಸ ಕಾವ್ಯ ಸಂಪ್ರದಾಯ ಕನ್ನಡ ಮತ್ತು ಇತರ ಭಾಷೆಗಳ ಕಾವ್ಯಗಳಲ್ಲಿ ಬೆಳೆದು ಬಂದಿದೆ. (ಜಿನಧರ್ಮವನ್ನು ಒಂದು ಕಾವ್ಯದಲ್ಲಿ, ಲೌಕಿಕವನ್ನು ಇನ್ನೊಂದು ಕಾವ್ಯದಲ್ಲಿ ಬೆಳಗುವೆನೆಂದು ಪಂಪ ಮಹಾಕವಿ ಹೇಳಿದ್ದನ್ನು ಇಲ್ಲಿ ನೆನೆಯಬಹುದು.)

ನಿತ್ಯಾನಂದೇಶ್ವರ ಬಾರಮಾಸದ ಪಾರಿಜಾತ ಕಾವ್ಯದಲ್ಲಿ ಋತುವರ್ಣನೆಯಿಲ್ಲ, ಮಾಸದ ವರ್ಣನೆಯಿಲ್ಲ, ಹಬ್ಬ ಉತ್ಸವಗಳಿಲ್ಲ. ಕವಿ ಕೇವಲ ಮಾಸಗಳ ಹೆಸರು, ಸಂಖ್ಯೆಯನ್ನು ಹೇಳುತ್ತ ಹೋಗುತ್ತಾನೆ. ಮೊದಮೊದಲು ಕಾವ್ಯ ನೀರಸವಾಗಿ ಕಂಡರೂ ಕಾವ್ಯದುದ್ದಕ್ಕೂ ವಿರಹದ ವರ್ಣನೆಯ ಜೊತೆಗೆ ಕವಿ ಆಧ್ಯಾತ್ಮ ಸಾಧನೆಯಲ್ಲಿ ಒಂದೊಂದೇ ಹೆಜ್ಜೆ ಮುಂದೆ ಸಾಗುತ್ತ ಹೋಗುವುದು ಓದುಗನ ಹೃದಯವನ್ನು ಸೆರೆ ಹಿಡಿಯುತ್ತದೆ. ಎಲ್ಲ ಬಾರಮಾಸಗಳಂತೆ ಇಲ್ಲಿಯೂ ವಿರಹಿಣಿಯ ಮುಖದಿಂದಲೇ ಕಾವ್ಯವನ್ನು ಹೇಳಿಸಲಾಗಿದೆ. ಮತ್ತು ವಿರಹಿಣಿ ತನ್ನ ಗೆಳತಿಯನ್ನು ಸಂಬೋಧಿಸುತ್ತ ಹೋಗುತ್ತಾಳೆ. ಶಂಕರೀ, ಮಂಗಳ ರೂಪೇ, ಚಂದನಗಂಧೀ, ಹರಿಣಾಕ್ಷೀ, ರಂಗದುಟಿ ರಮಣೀ ಎಂದು ಗೆಳತಿಯನ್ನು ಸಂಬೋಧಿಸುತ್ತಾಳೆ.[೧] ಇದೊಂದು ಶರಣ ಸತಿ ಲಿಂಗಪತಿ (ಮಧುರಾ ಭಕ್ತಿ) ಭಾವದ ಕಾವ್ಯವಾಗಿದೆ. ಇದರ ಬಗ್ಗೆ ವಿಶೇಷ ಅಧ್ಯಯನ ನಡೆಯುವುದು ಅವಶ್ಯವಿದೆ.[೨]

ಇತರ ಬಾರಮಾಸ ಕಾವ್ಯಗಳಂತೆ ಈಗ ಉಪಲಬ್ಧವಿರುವ ಕನ್ನಡದ ಎರಡು ಬಾರಮಾಸಗಳು ಜಾನಪದ ಕಾವ್ಯಗಳಾಗಿಲ್ಲ. ಲಿಂಗಣ್ಣವೊಡೆಯ ದೇಸಿ ಮತ್ತು

---

೧. ಉರ್ದು ಬಾರಮಾಸಗಳಲ್ಲಿ ಸುನೋ ಸಖಿಯೋ, ಸಖೀ, ಎಂಬ ಸಂಬೋಧನೆಗಳಿವೆ. ಲಿಂಗಣ್ಣನ ಬಾರಮಾಸದಲ್ಲಿ ಪ್ರಿಯಳೇ, ಸಖೀರತ್ನವೇ, ಯುವತೀ, ಪೆಣ್ಗಳ್ ಶಿರೋರತ್ನವೇ, ಮುಂತಾದ ಸಂಬೋಧನೆಗಳಿವೆ.

೨. ಅನುಬಂಧದಲ್ಲಿ ಕಾವ್ಯದ ಪೂರ್ತಿ ಪಾಠ ಕೊಟ್ಟಿದೆ.

ಮಾರ್ಗ ಎರಡೂ ರೀತಿಗಳನ್ನು ಬಳಸಿಕೊಂಡಿದ್ದಾನೆ. ಎರಡು ಕಾವ್ಯಗಳಲ್ಲಿ ಶ್ಲೋಕ ಮತ್ತು ಪದಗಳ ಬಳಕೆಯಿದೆ. ಲಿಂಗಣ್ಣವೊಡೆಯನ ಬಾರಮಾಸದ ಶ್ಲೋಕ ಮಾಲಿನೀ ವೃತ್ತವಾಗಿದೆ. ನಿತ್ಯಾನಂದೇಶ್ವರ ಬಾರಮಾಸದ ಶ್ಲೋಕ ವೃತ್ತವಾಗಿಲ್ಲ; ಅದು ಒಂದು ಬಗೆಯ ಪದವಾಗಿದೆ. ನಿತ್ಯಾನಂದೇಶ್ವರ ಬಾರಮಾಸವನ್ನು ಶಿಷ್ಟ ಜಾನಪದ ಕಾವ್ಯವೆಂದು ಹೇಳಬಹುದೇನೋ.

## ಕವಿ-ಕಾಲ-ಕಾವ್ಯ

ಒಂದು ಪ್ರದೇಶ, ಅಲ್ಲಿಯ ನೆಲ, ನೀರು, ಕಾಡು, ಪಕ್ಷಿ, ಪ್ರಾಣಿ, ಬೆಟ್ಟ, ನದಿ, ದೇವಾಲಯ ಮತ್ತು ಜನಜೀವನ ಅಲ್ಲಿ ಹುಟ್ಟಿ ಬೆಳೆವ ಕವಿಯ ಬದುಕಿನಲ್ಲಿ ಮಹತ್ವದ ಪಾತ್ರವಾಡುತ್ತವೆ. ನೂರಾರು ಗಾವುದ ದೂರವಿದ್ದರೂ ಪಂಪನಿಗೆ ಬನವಾಸಿಯನ್ನು ಮರೆಯಲಾಗಲಿಲ್ಲ. ಅಲ್ಲಿಯ ನಿಸರ್ಗ ಸೌಂದರ್ಯ, ನೆಲ, ನೀರು, ಜನಜೀವನ ಆತನ ಬದುಕಿಗೆ ಸಂಜೀವಿನಿ ಎರೆದಿದ್ದುವು - ಎಂದು ಹೇಳಿದರೆ ತಪ್ಪಾಗದು. ಕವಿ ಲಿಂಗವೊಡೆಯನ ಊರು ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿರುವ ಕಲ್ಲೂರು. ಈ ಪ್ರದೇಶ ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ಈ ಪ್ರದೇಶದ ಇತಿಹಾಸ ಪ್ರಥಮ ಶಿಲಾಯುಗದಿಂದಲೇ ಪ್ರಾರಂಭವಾಗುತ್ತದೆ. ತಮ್ಮದೇ ರೀತಿ ನೀತಿಗಳನ್ನು ಅಳವಡಿಸಿಕೊಂಡ ಮಾನವ ಜನಾಂಗವೊಂದು ಈ ಪ್ರದೇಶದಲ್ಲಿ ಆಗಲೇ ನೆಲೆಸಿದ್ದಿತು ಎಂದು ತಿಳಿದು ಬರುತ್ತದೆ. ಪುರಾತತ್ವ ಸಂಶೋಧಕರು ಮಸ್ಕಿ, ಮುದಗಲ್ಲ ಬಳಿಯ ಪಿಕಲಿಹಾಳ, ಕರಡಿಕಲ್ಲು, ಕಲ್ಲೂರು ಮೊದಲಾದ ಸ್ಥಳಗಳಲ್ಲಿ ನಡೆಸಿದ ಭೂಶೋಧನೆಗಳಿಂದ ನವಶಿಲಾಯುಗ ಸಂಸ್ಕೃತಿಯ ಜನವರ್ಗಗಳು ಈ ಭಾಗದಲ್ಲಿ ವಾಸವಾಗಿದ್ದ ವಿಷಯವು ವಿಶದವಾಗುತ್ತದೆ. ಕಲ್ಲು, ಕಬ್ಬಿಣ, ತಾಮ್ರ[೧] ಮುಂತಾದವುಗಳ ಉಪಯೋಗವನ್ನು ಇವರು ಅರಿತಿದ್ದರು. ಈ ಕಾಲ ಕ್ರಿ. ಪೂ. ಸುಮಾರು ೨೦೦೦ ವರ್ಷದಷ್ಟು ಹಿಂದಿನದೆಂದು ಡಾ. ಪಾಂಡುರಂಗರಾವ ದೇಸಾಯಿಯವರು ಹೇಳುತ್ತಾರೆ.

ಐತಿಹಾಸಿಕ ಕಾಲದಲ್ಲಿ ಕಲ್ಲೂರು ಅಗ್ರಸ್ಥಾನ ಪಡೆಯಿತು. ಸುಮಾರು ೧೫೦೦ ವರ್ಷಗಳ ಹಿಂದೆ ನಿರ್ಮಾಣವಾದುದೆಂದು ಹೇಳಲಾಗುವ ಮಾರಟೇಶ್ವರ

---

೧. ಕಲ್ಲೂರಿನ ಸುತ್ತಮುತ್ತ ಸಾವಿರಾರು ಎಕರೆ ಭೂಮಿಯಲ್ಲಿ ತಾಮ್ರದ ಗಣಿಗಳಿವೆ ಎಂದು ಭೂಗರ್ಭ ವಿಜ್ಞಾನಿಗಳು ಶೋಧಮಾಡಿ ತೋರಿಸಿದ್ದಾರೆ. - ಸಂಪಾದಕ.

ದೇವಾಲಯದಿಂದ ಕಲ್ಲೂರು ಪುಣ್ಯಕ್ಷೇತ್ರವೆನಿಸಿದೆ. ಊರ ಪಶ್ಚಿಮಕ್ಕೆ ಗುಡ್ಡದ ತುಸು ಎತ್ತರದ ಓರೆಯಲ್ಲಿರುವ ಈ ಮಂದಿರಕ್ಕೆ ಅನೇಕ ರಾಜರು, ಮಂತ್ರಿಗಳು, ಸೇನಾಪತಿಗಳು, ವೀರರು - ದತ್ತಿ ಬಿಟ್ಟಿದ್ದಾರೆ. ಕೀಳಾಯ ಮತ್ತು ಹೆಜ್ಜುಂಕಗಳಿಂದ ಶ್ರೀ ಮಾರಟೇಶ್ವರ ಅಂಗಭೋಗಕ್ಕೆ ದತ್ತಿ ಬಿಟ್ಟ ವಿಷಯ ಕಲ್ಯಾಣ ಚಾಲುಕ್ಯರ ಎರಡು ಶಾಸನಗಳಲ್ಲಿದೆ. ಇವೆರಡು ಶಾಸನಗಳು ಮಹಾಮಂಡಳೇಶ್ವರ ಬೂಚರಸರ ಕಾಲದವು. ಆರನೆಯ ವಿಕ್ರಮಾದಿತ್ಯನು ದಿಗ್ವಿಜಯ ಗಳಿಸಿ ನರ್ಮದಾ ನದಿಯ ದಂಡೆಯ ಮೇಲೆ ಬೀಡು ಬಿಟ್ಟಾಗ ಪಂಚಲಾಂಗುಲವೆಂಬ ಕ್ರತುವನ್ನು ಮಾಡಿ ಸರ್ವಕರ್ತೃ ಸೋಮಯಾಜಿ ಭಟ್ಟರಿಗೆ ಕಲ್ಲೂರನ್ನು ದಾನ ಮಾಡಿದ ವಿಷಯವನ್ನು ಇಲ್ಲಿಯ ಇನ್ನೊಂದು ಶಾಸನ ಸಾರುತ್ತದೆ.[೧] ಕ್ರಿ. ಶ. ೧೬೩೪ ರಲ್ಲಿ ಗಾಣಿಗ ಜಾಬಿಶೆಟ್ಟಿಯ ಮಗ ಸಿಂಗಣ್ಣನೆಂಬವನು ಮಾರಟೇಶ್ವರ ದೇವಾಲಯದ ಎದುರಿಗೆ ಗರುಡಗಂಬವನ್ನು ನಿಲ್ಲಿಸಿದನೆಂದು ಅಲ್ಲಿಯ ಒಂದು ಶಾಸನದಿಂದ ಕಂಡು ಬರುತ್ತದೆ.[೨] ಕಲ್ಲೂರು ಒಂದು ಸುಂದರವಾದ ಅಗ್ರಹಾರವಾಗಿತ್ತೆಂದು ಇಲ್ಲಿಯ ಶಾಸನಗಳಿಂದ ತಿಳಿದುಬರುತ್ತದೆ. ಲಿಂಗಣ್ಣ ಕವಿಯ ಬಾರಮಾಸವೂ ಕೂಡ ಈ ಮಾತನ್ನು ಸಮರ್ಥಿಸುತ್ತದೆ: "ಧರೆವೆಣ್ಣು ಶಿರದಮಾಣಿಕದೊಲು ರಾಜಿಪ ಮೇಲು ರಾಯಚೂರು ಸೀಮೆಯೊಳು ಮೆರೆವ ಕಲ್ಲೂರ ಗ್ರಾಮ ............" ಎಂದು ಕವಿ ವರ್ಣಿಸಿದ್ದಾನೆ.[೩]

## ಕಾಲ

ಕವಿಯ ಕಾಲ ನಿರ್ಣಯಕ್ಕೆ ಮೂರು ಸಂಗತಿಗಳು ಆಧಾರವಾಗಿವೆ:

೧. ಪತ್ರ ಒಂದು
೨. ಪತ್ರ ಎರಡು
೩. ಮಂತ್ರಾಲಯದ ಮೂಲ ರಾಘವೇಂದ್ರ ಸ್ವಾಮಿಗಳು ಕಲ್ಲೂರಿಗೆ ಬಂದುದು ಮತ್ತು ಕವಿ ಬಾರಮಾಸ ಬರೆದುದು.

---

೧. ಕರ್ನಾಟಕ ಸಂಘ ರಾಯಚೂರು - ಬೆಳ್ಳಿ ಹಬ್ಬದ ನೆನಪಿನ ಸಂಚಿಕೆ ಪುಟ ೫೩. ಪ್ರ. ೧೯೯೨.

೨. ಅದೇ. ಪುಟ ೫೩ ( ಈ ಗರುಡಗಂಬ ಚೆಲುವಾಗಿ ಎತ್ತರವಾಗಿದ್ದು ಕಣ್ಮನ ಸೆಳೆಯುತ್ತದೆ).

೩. ಬಾರಮಾಸ. ಪದ ೪೩.

ಮಾರ್ಗ ಎರಡೂ ರೀತಿಗಳನ್ನು ಬಳಸಿಕೊಂಡಿದ್ದಾನೆ. ಎರಡು ಕಾವ್ಯಗಳಲ್ಲಿ ಶ್ಲೋಕ ಮತ್ತು ಪದಗಳ ಬಳಕೆಯಿದೆ. ಲಿಂಗಣ್ಣವೊಡೆಯನ ಬಾರಮಾಸದ ಶ್ಲೋಕ ಮಾಲಿನೀ ವೃತ್ತವಾಗಿದೆ. ನಿತ್ಯಾನಂದೇಶ್ವರ ಬಾರಮಾಸದ ಶ್ಲೋಕ ವೃತ್ತವಾಗಿಲ್ಲ; ಅದು ಒಂದು ಬಗೆಯ ಪದವಾಗಿದೆ. ನಿತ್ಯಾನಂದೇಶ್ವರ ಬಾರಮಾಸವನ್ನು ಶಿಷ್ಟ ಜಾನಪದ ಕಾವ್ಯವೆಂದು ಹೇಳಬಹುದೇನೋ.

## ಕವಿ-ಕಾಲ-ಕಾವ್ಯ

ಒಂದು ಪ್ರದೇಶ, ಅಲ್ಲಿಯ ನೆಲ, ನೀರು, ಕಾಡು, ಪಕ್ಷಿ, ಪ್ರಾಣಿ, ಬೆಟ್ಟ, ನದಿ, ದೇವಾಲಯ ಮತ್ತು ಜನಜೀವನ ಅಲ್ಲಿ ಹುಟ್ಟಿ ಬೆಳೆವ ಕವಿಯ ಬದುಕಿನಲ್ಲಿ ಮಹತ್ವದ ಪಾತ್ರವಾಡುತ್ತವೆ. ನೂರಾರು ಗಾವುದ ದೂರವಿದ್ದರೂ ಪಂಪನಿಗೆ ಬನವಾಸಿಯನ್ನು ಮರೆಯಲಾಗಲಿಲ್ಲ. ಅಲ್ಲಿಯ ನಿಸರ್ಗ ಸೌಂದರ್ಯ, ನೆಲ, ನೀರು, ಜನಜೀವನ ಆತನ ಬದುಕಿಗೆ ಸಂಜೀವಿನಿ ಎರೆದಿದ್ದುವು - ಎಂದು ಹೇಳಿದರೆ ತಪ್ಪಾಗದು. ಕವಿ ಲಿಂಗವೊಡೆಯನ ಊರು ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿರುವ ಕಲ್ಲೂರು. ಈ ಪ್ರದೇಶ ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ಈ ಪ್ರದೇಶದ ಇತಿಹಾಸ ಪ್ರಥಮ ಶಿಲಾಯುಗದಿಂದಲೇ ಪ್ರಾರಂಭವಾಗುತ್ತದೆ. ತಮ್ಮದೇ ರೀತಿ ನೀತಿಗಳನ್ನು ಅಳವಡಿಸಿಕೊಂಡ ಮಾನವ ಜನಾಂಗವೊಂದು ಈ ಪ್ರದೇಶದಲ್ಲಿ ಆಗಲೇ ನೆಲೆಸಿದ್ದಿತು ಎಂದು ತಿಳಿದು ಬರುತ್ತದೆ. ಪುರಾತತ್ವ ಸಂಶೋಧಕರು ಮಸ್ಕಿ, ಮುದಗಲ್ಲ ಬಳಿಯ ಪಿಕಲಿಹಾಳ, ಕರಡಿಕಲ್ಲು, ಕಲ್ಲೂರು ಮೊದಲಾದ ಸ್ಥಳಗಳಲ್ಲಿ ನಡೆಸಿದ ಭೂಶೋಧನೆಗಳಿಂದ ನವಶಿಲಾಯುಗ ಸಂಸ್ಕೃತಿಯ ಜನವರ್ಗಗಳು ಈ ಭಾಗದಲ್ಲಿ ವಾಸವಾಗಿದ್ದ ವಿಷಯವು ವಿಶದವಾಗುತ್ತದೆ. ಕಲ್ಲು, ಕಬ್ಬಿಣ, ತಾಮ್ರ[೧] ಮುಂತಾದವುಗಳ ಉಪಯೋಗವನ್ನು ಇವರು ಅರಿತಿದ್ದರು. ಈ ಕಾಲ ಕ್ರಿ. ಪೂ. ಸುಮಾರು ೨೦೦೦ ವರ್ಷದಷ್ಟು ಹಿಂದಿನದೆಂದು ಡಾ. ಪಾಂಡುರಂಗರಾವ ದೇಸಾಯಿಯವರು ಹೇಳುತ್ತಾರೆ.

ಐತಿಹಾಸಿಕ ಕಾಲದಲ್ಲಿ ಕಲ್ಲೂರು ಅಗ್ರಸ್ಥಾನ ಪಡೆಯಿತು. ಸುಮಾರು ೧೫೦೦ ವರ್ಷಗಳ ಹಿಂದೆ ನಿರ್ಮಾಣವಾದುದೆಂದು ಹೇಳಲಾಗುವ ಮಾರಟೇಶ್ವರ

---

೧. ಕಲ್ಲೂರಿನ ಸುತ್ತಮುತ್ತ ಸಾವಿರಾರು ಎಕರೆ ಭೂಮಿಯಲ್ಲಿ ತಾಮ್ರದ ಗಣಿಗಳಿವೆ ಎಂದು ಭೂಗರ್ಭ ವಿಜ್ಞಾನಿಗಳು ಶೋಧಮಾಡಿ ತೋರಿಸಿದ್ದಾರೆ. - ಸಂಪಾದಕ.

ದೇವಾಲಯದಿಂದ ಕಲ್ಲೂರು ಪುಣ್ಯಕ್ಷೇತ್ರವೆನಿಸಿದೆ. ಊರ ಪಶ್ಚಿಮಕ್ಕೆ ಗುಡ್ಡದ ತುಸು ಎತ್ತರದ ಓರೆಯಲ್ಲಿರುವ ಈ ಮಂದಿರಕ್ಕೆ ಅನೇಕ ರಾಜರು, ಮಂತ್ರಿಗಳು, ಸೇನಾಪತಿಗಳು, ವೀರರು - ದತ್ತಿ ಬಿಟ್ಟಿದ್ದಾರೆ. ಕೀಳಾಯ ಮತ್ತು ಹೆಜ್ಜುಂಕಗಳಿಂದ ಶ್ರೀ ಮಾರಟೇಶ್ವರ ಅಂಗಭೋಗಕ್ಕೆ ದತ್ತಿ ಬಿಟ್ಟ ವಿಷಯ ಕಲ್ಯಾಣ ಚಾಲುಕ್ಯರ ಎರಡು ಶಾಸನಗಳಲ್ಲಿದೆ. ಇವೆರಡು ಶಾಸನಗಳು ಮಹಾಮಂಡಳೇಶ್ವರ ಬೂಚರಸರ ಕಾಲದವು. ಆರನೆಯ ವಿಕ್ರಮಾದಿತ್ಯನು ದಿಗ್ವಿಜಯ ಗಳಿಸಿ ನರ್ಮದಾ ನದಿಯ ದಂಡೆಯ ಮೇಲೆ ಬೀಡು ಬಿಟ್ಟಾಗ ಪಂಚಲಾಂಗುಲವೆಂಬ ಕ್ರತುವನ್ನು ಮಾಡಿ ಸರ್ವಕರ್ತೃ ಸೋಮಯಾಜಿ ಭಟ್ಟರಿಗೆ ಕಲ್ಲೂರನ್ನು ದಾನ ಮಾಡಿದ ವಿಷಯವನ್ನು ಇಲ್ಲಿಯ ಇನ್ನೊಂದು ಶಾಸನ ಸಾರುತ್ತದೆ.[೧] ಕ್ರಿ. ಶ. ೧೭೩೯ ರಲ್ಲಿ ಗಾಣಿಗ ಜಾಬಿಶೆಟ್ಟಿಯ ಮಗ ಸಿಂಗಣ್ಣನೆಂಬವನು ಮಾರಟೇಶ್ವರ ದೇವಾಲಯದ ಎದುರಿಗೆ ಗರುಡಗಂಬವನ್ನು ನಿಲ್ಲಿಸಿದನೆಂದು ಅಲ್ಲಿಯ ಒಂದು ಶಾಸನದಿಂದ ಕಂಡು ಬರುತ್ತದೆ.[೨] ಕಲ್ಲೂರು ಒಂದು ಸುಂದರವಾದ ಅಗ್ರಹಾರವಾಗಿತ್ತೆಂದು ಇಲ್ಲಿಯ ಶಾಸನಗಳಿಂದ ತಿಳಿದುಬರುತ್ತದೆ. ಲಿಂಗಣ್ಣ ಕವಿಯ ಬಾರಮಾಸವೂ ಕೂಡ ಈ ಮಾತನ್ನು ಸಮರ್ಥಿಸುತ್ತದೆ: "ಧರೆವೆಣ್ಣು ಶಿರದಮಾಣಿಕದೊಲು ರಾಜಿಪ ಮೇಲು ರಾಯಚೂರು ಸೀಮೆಯೊಳು ಮೆರೆವ ಕಲ್ಲೂರ ಗ್ರಾಮ ............" ಎಂದು ಕವಿ ವರ್ಣಿಸಿದ್ದಾನೆ.[೩]

## ಕಾಲ

ಕವಿಯ ಕಾಲ ನಿರ್ಣಯಕ್ಕೆ ಮೂರು ಸಂಗತಿಗಳು ಆಧಾರವಾಗಿವೆ:

೧. ಪತ್ರ ಒಂದು
೨. ಪತ್ರ ಎರಡು
೩. ಮಂತ್ರಾಲಯದ ಮೂಲ ರಾಘವೇಂದ್ರ ಸ್ವಾಮಿಗಳು ಕಲ್ಲೂರಿಗೆ ಬಂದುದು ಮತ್ತು ಕವಿ ಬಾರಮಾಸ ಬರೆದುದು.

---

೧. ಕರ್ನಾಟಕ ಸಂಘ ರಾಯಚೂರು - ಬೆಳ್ಳಿ ಹಬ್ಬದ ನೆನಪಿನ ಸಂಚಿಕೆ ಪುಟ ೫೩. ಪ್ರ. ೧೯೬೨.

೨. ಅದೇ. ಪುಟ ೫೩ ( ಈ ಗರುಡಗಂಬ ಚೆಲುವಾಗಿ ಎತ್ತರವಾಗಿದ್ದು ಕಣ್ಮನ ಸೆಳೆಯುತ್ತದೆ).

೩. ಬಾರಮಾಸ. ಪದ ೪೩.

## ೧. ಪತ್ರ ಒಂದು

ಪತ್ರ ಒಂದು.[೧] ಇದು ದಾನಪತ್ರ, ಶಾಲಿವಾಹನ ಶಕ ೧೫೩೩ನೆಯ ವಿರೋಧಿ ಕೃತು ನಾಮ ಸಂವತ್ಸರದ ಶ್ರಾವಣ ಶುದ್ಧ|| ೫ ಆದಿವಾರದಲ್ಲು ಕ|| ಕಲ್ಲೂರು ಸ್ಥಳದೊಳಗೆ ಇರುವ ಹಿರೇ ತಮ್ಮಣ್ಣ ಒಡೆಯರ ಕುಮಾರ ಲಿಂಗಣ್ಣವೊಡೆಯರಿಗೆ ಸ್ವಗ್ರಾಮದ ಠಾಣಾದಾರ ಅಂಬಾಜಿ ಪಾತ್ತಾವ ಮುಜುಮದಾರ, ಗಿರಿಮಾಜಿ ಪಾತ್ತಾವ ಗೌಡ ಚೆನ್ನಬಸಪ್ಪ...... ಮೊದಲಾದ ಸಮಸ್ತ ಪ್ರಜೆಗಳು ಬರೆದುಕೊಟ್ಟ ದಾನಪತ್ರದ ವಿವರ ಎಂತೆಂದೊಡೆ.........

ಪತ್ರದಲ್ಲಿ ಮುಂದಿನ ವಿಷಯ ಹೀಗಿದೆ: ಲಿಂಗಣ್ಣವೊಡೆಯ ಕರ್ನಾಟಕಕ್ಕೆ ಹೋಗಿ ಗೌರವ ಪಡೆದು ಬಂದ ಬಳಿಕ ಊರಿನ ಹತ್ತು ಸಮಸ್ತರು, ಗೌಡ, ಕುಲಕರಣಿ, ಅಷ್ಟಾದಶ ಪ್ರಜೆಗಳು ಲಿಂಗಣ್ಣವೊಡೆಯನಿಗೆ ಗ್ರಾಮದ ಮೂಲಸ್ಥಾಪನದ ದೇವರು ಶ್ರೀ ಮಾರ್ಕಂಡೇಶ್ವರ ಗುಡಿ ಅರ್ಚನಾಧಿಕಾರಕ್ಕೆ ದಾನ ಪತ್ರ ಬರೆದುಕೊಟ್ಟರು. ಗ್ರಾಮದ ಜೀಯರು ತಮಗೆ ಸಿಗಬೇಕಾದುದು ದೊರಕಲಿಲ್ಲವೆಂದು ಪ್ರತಿಭಟಿಸಿದಾಗ ಊರ ಪ್ರಮುಖರು ಅವರಿಗೆ ಬುದ್ಧಿವಾದ ಹೇಳಿ ಜೀಯತನ ಮಾಡಿಕೊಂಡು ಇರಲು ಆದೇಶಿಸಿದರು......... ಈ ಅರ್ಚಕ ಸ್ಥಾನವನ್ನು ನಿಮ್ಮ ಪುತ್ರ ಪಾರಂಪರ್ಯ ಅನುಭವಿಸಿಕೊಂಡು ಹೋಗಬೇಕು. ಈ ದೇವರ ಪೂಜೆ ನಿಮ್ಮ ದಾಯಾದಿಗಳಿಗೆ, ಅಣ್ಣತಮ್ಮಂದಿರಿಗೆ ಯಾರಿಗಾದರೂ ಸಂಬಂಧವಿಲ್ಲ. ದಾನಪತ್ರದ ಕೆಳಗೆ ಅಷ್ಟಾದಶ ಪ್ರಜೆಗಳ ಋಜುಗಳಿವೆ.

ಈ ಪತ್ರದಲ್ಲಿ ನಮೂದಿಸಿರುವ ಕರ್ನಾಟಕವೆಂದರೆ ಆ ಕಾಲದಲ್ಲಿ ಕೊಪ್ಪಳ ಸೀಮೆಗೆ ಕರ್ನಾಟಕವೆಂಬ ಹೆಸರಿತ್ತೆಂದು ಜನಜನಿತವಾಗಿ ತಿಳಿದುಬಂದ ವಿಷಯ. ಪಂಪ ಹೇಳುವ ತಿರುಳ್ಗನ್ನಡ ನಾಡಿನಲ್ಲಿ ಕೊಪ್ಪಳವೂ ಇದ್ದುದರಿಂದ ಈ ಭಾಗದ ಜನರು ಕೊಪ್ಪಳಕ್ಕೆ ಕರ್ನಾಟಕವೆಂದು ಕರೆಯುತ್ತಿರಬೇಕು. ಈ ಪತ್ರದಲ್ಲಿ ಶ್ರೀ ಮಾರ್ಕಂಡೇಶ್ವರ ಗುಡಿ ಎಂದಿರುವುದು ಅದು ಮಾರಟೇಶ್ವರ ಗುಡಿಯೇ. ಜನರಲ್ಲಿ ಮಾರಟೇಶ್ವರ ದೇವಸ್ಥಾನಕ್ಕೆ ಮಾರ್ಕಂಡೇಶ್ವರ ಗುಡಿಯೆಂದೇ ಕರೆಯುವ ರೂಢಿಯಿತ್ತು; ಅದು ಇಂದಿಗೂ ಇದೆ. ಮಾರಟ ಹೋಗಿ ಮಾರ್ಕಂಡೇಶ್ವರ

---

೧. ಪತ್ರದ ಸಂಪೂರ್ಣ ಪಾಠ ಅನುಬಂಧದಲ್ಲಿದೆ.

ಹೇಗಾಯಿತೋ ತಿಳಿಯದು. ಲಿಂಗಣ್ಣವೊಡೆಯನಿಗೆ ಕೊಟ್ಟ ಎರಡೂ ಪತ್ರಗಳಲ್ಲಿ ಮಾರ್ಕಂಡೇಶ್ವರ ಗುಡಿಯೆಂದೇ ಹೆಸರಿದೆ. ಮಾರಟ ಎನ್ನಲು ಜನರಿಗೆ ಕಷ್ಟವಾಯಿತೋ ಅಥವಾ ಅದರ ಅರ್ಥ ತಿಳಿಯಲಿಲ್ಲವೋ ಯಾವುದೂ ಹೇಳಲು ಬರುವುದಿಲ್ಲ. ಈ ಎರಡೂ ಹೆಸರುಗಳು ಶಿವನಿಗೆ ಸಂಬಂಧಪಟ್ಟುವು. ಒಂದರಲ್ಲಿ ಶಿವನು ಮಾರನನ್ನು ಕೊಂದದ್ದು ಮತ್ತು ಯಮನಿಂದ ಮಾರ್ಕಂಡೇಯನನ್ನು ರಕ್ಷಿಸಿದ್ದು ಕಂಡುಬರುತ್ತದೆ. ಮಾರಾಟದ ವ್ಯುತ್ಪತ್ತಿ ಹೀಗಿದೆ: ಮಾರಂ ಟಲಯತಿ ಇತಿ ಮಾರಟಃ ಟಕಾರೋ ಹಂತಕಃ. ಮಾರ+ ಟ = ಮಾರಟ = ಶಿವ.

ಕಲ್ಲೂರಿನ ಎಲ್ಲ ಶಾಸನಗಳಲ್ಲಿ ಮಾರಟೇಶ್ವರ ಮಂದಿರವೆಂದೇ ಉಕ್ತವಾಗಿದೆ. ದಾನಪತ್ರಗಳಲ್ಲಿ ಭಕ್ತರು ತಮಗೆ ಪ್ರಿಯವಾದ ಮಾರ್ಕಂಡೇಶ್ವರ ಗುಡಿ ಎಂದೇ ಬರೆದಿದ್ದಾರೆ. ಮತ್ತು ಕಲ್ಲೂರಿನಲ್ಲಿ ಮಾರ್ಕಂಡೇಶ್ವರ ಗುಡಿ ಎಂದೇ ಬರೆದಿದ್ದಾರೆ. ಮತ್ತು ಕಲ್ಲೂರಿನಲ್ಲಿ ಮಾರ್ಕಂಡೇಶ್ವರ ಎಂಬ ಇನ್ನೊಂದು ಗುಡಿಯೂ ಇಲ್ಲ. ಅದನ್ನು ನಾನು ಶೋಧಿಸಿ ನೋಡಿದೆನು. ೧೯೭೦ ರಲ್ಲಿ ಪ್ರಕಟವಾದ ಮೈಸೂರು ಸ್ಟೇಟ್ ರಾಯಚೂರು ಡಿಸ್ಟ್ರಿಕ್ಟ್ ಗ್ಯಾಜೆಟಿಯರ್‌ನಲ್ಲಿಯೂ ಮಾರ್ಕಂಡೇಶ್ವರ ಗುಡಿಯೆಂದೇ ಬರೆಯಲಾಗಿದೆ. "There are six temples in and around the village. Out of these The Markandeshwar temple deserves some notice"[೧]. ಇದಕ್ಕಿಂತಲೂ ದೊಡ್ಡ ತಪ್ಪು ಇನ್ನೊಂದಿದೆ. 'History and Legend in Hyderabad' ಎಂಬ ಪುಸ್ತಕದಲ್ಲಿ ಮಾರಟೇಶ್ವರ ಗುಡಿಗೆ ಮುಕುಂದೇಶ್ವರ ಗುಡಿಯೆಂದು ಬರೆದಿದ್ದಾರೆ.[೨] ಇವರು ಯಾರೂ ಶಾಸನಗಳ ಅಧ್ಯಯನ ಮಾಡಿಲ್ಲ. ಆದುದರಿಂದ ಅವರಿಂದ ಈ ತಪ್ಪುಗಳಾಗಿವೆ. ಮಾರ್ಕಂಡೇಶ್ವರ, ಮುಕುಂದೇಶ್ವರ - ಎಲ್ಲ ಹೆಸರು ಮಾರಟೇಶ್ವರ ಗುಡಿಯನ್ನೇ ಹೇಳುತ್ತವೆ. ಒಂದು ಆಂತರಿಕ

---

೧. ಮೈಸೂರು ಸ್ಟೇಟ್ ರಾಯಚೂರು ಡಿಸ್ಟ್ರಿಕ್ಟ್ ಗೆಜೆಟಿಯರ್, ಪುಟ ೭೦೧.

೨. 'History And Legend In Hyderabad' ಪ್ರಕಾಶಕರು Department of Information and Public Relations, Hyderabad - ಡಿಸೆಂಬರ್ ೧೯೫೬, ಪುಟ ೧೧೪.

ಪ್ರಮಾಣ ನಮಗೆ ದೊರೆಯುತ್ತದೆ. ಧೂಪದ ಮನೆತನದವರಿಗೆ ಮಾರಟೇಶ್ವರನೇ ಕುಲದೈವ. ಹಿಂದೆ ಆ ಮನೆತನದವರು ಗುಡಿಯಲ್ಲಿ ಧೂಪ ಹಾಕುತ್ತಿದ್ದರಂತೆ. ಇದೇ ಮನೆತನದ ಬಾರಮಾಸದ ಕವಿ ಲಿಂಗಣ್ಣ ತನ್ನ ಒಂದು ಪದದಲ್ಲಿ ಮಾರಟೇಶ್ವರ ಎಂಬ ಅಂಕಿತವನ್ನಿಟ್ಟುಕೊಂಡಿದ್ದಾನೆ. ಇವನ ಮೊಮ್ಮಗ - ಆತನ ಹೆಸರೂ ಲಿಂಗಣ್ಣನೇ - ಅವನು ಬರೆದ 'ವರರಮ್ಯ ರತ್ನಾಕರ' ಎಂಬ ಕಾವ್ಯದಲ್ಲಿ ಧೂಪದ ಮನೆತನದ ವಂಶಾವಳಿಯನ್ನು ಹೇಳುತ್ತಾನೆ. ಮತ್ತು ಆತನು ತನ್ನ ಅಂಕಿತವನ್ನು ಮಾರಟೇಶ್ವರನೆಂದೇ ಇಟ್ಟುಕೊಂಡಿದ್ದಾನೆ.

## ೨. ಪತ್ರ ಎರಡು

ಈ ಪತ್ರದ ಮತ್ತು ಮೊದಲನೆಯ ಪತ್ರದ ಶಕ, ಸಂವತ್ಸರ, ದಿನ, ಎಲ್ಲವೂ ಒಂದೇಯಾಗಿವೆ."ಶ್ರೀ ಶಾಲಿವಾಹನ ಶಕ ೧೫೩೩ ನೆಯ (ಕ್ರಿ. ಶ. ೧೬೧೧) ವಿರೋಧಿ ವಿಕೃತಿನಾಮ ಸಂ|| ಶ್ರಾವಣ ಶು||೫ ಆದಿವಾರದಲ್ಲು ಶ್ರೀಮತ್ ಕಸ್ಬೆ ಕಲ್ಲೂರ ಸ್ಥಳದ ಶ್ರೀ ಮಾರ್ಕಂಡೇಶ್ವರ ಪೂಜಾರ ಹಿರೇ ತಮ್ಮಯ್ಯನ ಮಗ ಲಿಂಗಣ್ಣವೊಡೆಯರಿಗೆ ಸ್ವಗ್ರಾಮದ ಗೌಡರು ಹಳೆಯ ಜೋಳದ ಯಲ್ಲಪ್ಪಗೌಡ, ನಾಗಣ್ಣಗೌಡ, ಕರೆಣ್ಣಗೌಡ, ಲಿಂಗಣ್ಣಗೌಡರು - ಇವರು ನಾಲ್ವರು ಅಪಮೃತ್ಯುದ ಮಾತಿಗಾಗಿ ಗ್ರಾಮವ ಬಿಟ್ಟು ಹೋಗಿ ಇದ್ದರು ............ ."

ಸಂವತ್ಸರ, ಮಾಸ, ದಿನ ಈ ಎರಡೂ ಪತ್ರಗಳಲ್ಲಿ ಒಂದೇ ಆಗಿರುವದು ವಿಚಿತ್ರ ಸಂಗತಿಯಾಗಿದೆ. ಆದರೆ ಎರಡೂ ಪತ್ರಗಳ ವಿಷಯ ಬೇರೆ ಬೇರೆಯಾಗಿದೆ. ಒಂದನೆಯ ಪತ್ರದಲ್ಲಿ ಮಾರ್ಕಂಡೇಶ್ವರ ಪೂಜೆಯ ಅಧಿಕಾರವನ್ನು ಅಷ್ಟಾದಶ ಪ್ರಜೆಗಳು ಕೊಟ್ಟ ಸಂಗತಿಯಿದೆ. ಎರಡನೆಯ ಪತ್ರದಲ್ಲಿ ಮಾರ್ಕಂಡೇಶ್ವರ ಪೂಜಾರ ಹಿರೇ ತಮ್ಮಯ್ಯನ ಮಗ ಲಿಂಗಣ್ಣ ಒಡೆಯರಿಗೆ ಎಂದು ಬರೆಯಲಾಗಿದೆ. ಎಂದರೆ ನಾನು ಮೊದಲು ಹೇಳಿದ ಒಂದನೆಯ ಪತ್ರವೇ ಮೊದಲು ಬರೆದುಕೊಟ್ಟುದು; ಅದರಲ್ಲಿ ಪೂಜಾರಿತನ ವಹಿಸಿದ ಸಂಗತಿಯಿದೆ. ಎರಡನೆಯ ಪತ್ರದಲ್ಲಿ ಲಿಂಗಣ್ಣವೊಡೆಯನಿಗೆ ಮಾರ್ಕಂಡೇಶ್ವರ ಪೂಜಾರ ಎಂದು ನೇರವಾಗಿ ಹೇಳಲಾಗಿದೆ. ಒಂದನೆಯ ಅಥವಾ ಮೊದಲನೆಯ ಪತ್ರ ಬರೆದು ಕೊಟ್ಟವರು ಬೇರೆ. ಆ ಪತ್ರದ ವಿಷಯವೂ ಬೇರೆ. ಎರಡನೆಯ ಪತ್ರವನ್ನು ಬರೆದುಕೊಟ್ಟವರೂ

ಬೇರೆ; ಈ ಪತ್ರದ ವಿಷಯವೂ ಬೇರೆ.[೧] ಆ ವಿಷಯ ಗ್ರಾಮದ ಜನರಲ್ಲಿ ಉಂಟಾದ ವೈರವನ್ನು ಸೂಚಿಸುತ್ತದೆ. ಆಗಿನ ಸಾಮಾಜಿಕ ಬದುಕಿನ ಒಂದು ಸ್ಪಷ್ಟ ಚಿತ್ರಣ ಈ ಪತ್ರದಲ್ಲಿದೆ. ಲಿಂಗಾಯತರಲ್ಲಿ ಲಾಳಗೊಂಡರು ಎಂಬ ಒಂದು ಪಂಗಡವಿದೆ. ಆ ಕಾಲಕ್ಕೆ ಉಳಿದ ಲಿಂಗಾಯತರು ಲಾಳಗೊಂಡರನ್ನು ಸೇರುತ್ತಿರಲಿಲ್ಲವೆಂದು ಈ ಪತ್ರದಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ.''......... ಮಧ್ಯಕಾಲದಲ್ಲೂ ರಾಜಶ್ರೀ ರಡ್ಡೀಗೌಡರು ಸರಿಮೇಟಿ ಅವರ ಉಪದ್ರವಕ್ಕೆ ಲಚಮಣ್ಣ, ತಿಮ್ಮಣ್ಣನು ಇವರ ಲಾಳಗೊಂಡರು ಇರಬಾರದು ಎಂದು ಇವರಿಗೆ ಬಹು ಕಷ್ಟ ಬಡಿಸಿದರು. ಸರಕಾರದ ಕಡೆಯಿಂದ ಬಂದವರಿಗೆ ಉಳಿಕೆ ನೀಡಿಸುವರು. ತುಪ್ಪದ ಕೊಡ ಇವರ ಕೈಲಿ ಕಿಲ್ಲೆ ರಾಯಚೂರಿಗೆ ಹೊರಿಸೋಣ. ಈ ಪ್ರಕಾರ ಉಪದ್ರ ತಾಳಲಾರದೆ ಲಚಮಣ್ಣ ತಿಮ್ಮಣ್ಣನು ರಡ್ಡಿಯವರು ಕೊಡೊ ಉಪದ್ರಕ್ಕೆ ಮಧ್ಯಕಾಲದಲ್ಲಿ ಬಿಟ್ಟು ಈರ್ವರು ಬಿಟ್ಟು ಬಳ್ಳಾರಿಯ ಸೀಮೆಯ ಹೊಳಗೆ ಇದ್ದಾರು. ತಮ್ಮ ಅತಾರೋಟಿ ಮಾಡಿವುಣ್ಣುತ್ತಿದ್ದರು. ಇವರ ಹೊಲದ ವಿವರವು -'' ಇದಲ್ಲದೆ ಇನ್ನೊಂದು ಮನೆತನದ ವಾದವಿವಾದವು ಆಸ್ತಿಯ ಬಗ್ಗೆಯೂ ಈ ಪತ್ರದಲ್ಲಿ ನಮೂದಿಸಲಾಗಿದೆ. ಪತ್ರದ ಈ ವಿಷಯ ಸ್ಪಷ್ಟವಾಗಿ ಇರದಿದುದರಿಂದ ನಿಖರ ವಿಷಯ ಸರಿಯಾಗಿ ತಿಳಿಯುವದಿಲ್ಲ. ಆದರೆ ಲಿಂಗಣ್ಣವೊಡೆಯ ಊರನ್ಯಾಯವನ್ನು ಬಗೆಹರಿಸುತ್ತಿದ್ದ ಮತ್ತು ಶೋಷಿತರನ್ನು ಸಂತೈಸಿ ಅವರಿಗೆ ನ್ಯಾಯದೊರಕಿಸುತ್ತಿದ್ದ ಎಂಬುದು ಒಟ್ಟಾರೆ ಈ ಪತ್ರದ ಅರ್ಥವಾಗಿದೆ. ೨೪೮ ಶಿಷ್ಯರ ಮನೆಗಳು ಲಿಂಗಣ್ಣವೊಡೆಯನ ಮನೆತನಕ್ಕೆ ಇದ್ದವು. ಮತ್ತು ಪೀಡಿ ಪೀಡಿ ಇರುವವರೆಗೆ ಲಿಂಗಣ್ಣವೊಡೆಯರ ಮನೆತನದವರೇ ೨೪೮ ಶಿಷ್ಯರ ಮನೆಗಳಿಗೆ ಇವರೇ ಗುರುಗಳಾಗಿರಬೇಕೆಂದು ಶಿಷ್ಯರು ಬರೆದು ಕೊಟ್ಟುದು ಈ ಪತ್ರದಲ್ಲಿ ಸ್ಪಷ್ಟವಾಗಿದೆ.

ಧಾರ್ಮಿಕ, ಸಾಮಾಜಿಕ ಮುಂತಾದ ಆಗಿನ ಕಾಲದ ಆಚಾರ ವಿಚಾರಗಳು ಈ ಪತ್ರದಿಂದ ಗೊತ್ತಾಗುತ್ತವೆ. ಭಾಷೆಯ ದೃಷ್ಟಿಯಿಂದಲೂ ಈ ಪತ್ರ ಬಹಳ ಮಹತ್ವದ್ದಾಗಿದೆ. ಅತಾರೋಟಿ, ಜುಲುಮಿ, ರುಸುಮು, ಇನಾಮತಿ, ಪೀಡಿ ಪೀಡಿ ಮುಂತಾದ ಉರ್ದು, ಹಿಂದಿ, ಫಾರ್ಸಿ ಭಾಷೆಗಳ ಶಬ್ದಗಳು ಆ ಕಾಲಕ್ಕಾಗಲೇ ಕನ್ನಡದಲ್ಲಿ ಬೆರೆತು ಬಳಕೆಯಾಗಿದ್ದುವೆಂಬುದು ಸ್ಪಷ್ಟವಾಗುತ್ತದೆ.

---

೧. ಅನುಬಂಧದಲ್ಲಿ ಈ ಪತ್ರದ ಪೂರ್ಣಪಾಠವಿದೆ.

ಈ ಎರಡೂ ಪತ್ರಗಳ ಇನ್ನೊಂದು ಮಹತ್ವದ ವಿಷಯವೇನೆಂದರೆ: ಎರಡೂ ಪತ್ರಗಳಲ್ಲಿ ಬೇರೆ ಬೇರೆ ಜನರ ಹೆಸರುಗಳಿವೆ. ಪೂಜಾರಿಕೆ ಕೊಟ್ಟವರು ಬೇರೆ; ಶೋಷಣೆಯ ವಿರುದ್ಧ ನ್ಯಾಯ ಕೇಳಿದವರು ಮತ್ತು ಊರಿನ ಇತರರು ಅಲ್ಲದೆ ೨೪೮ ಶಿಷ್ಯರು ಬೇರೆ. ಒಂದೇ ಸಂವತ್ಸರ. ಒಂದೇ ಮಿತಿ. ಒಂದೇ ದಿನ ಎರಡೂ ಪತ್ರಗಳಲ್ಲಿದ್ದುದು ಆಶ್ಚರ್ಯದ ಸಂಗತಿಯೇನಲ್ಲ. ಪ್ರೌಢನೂ ವಿದ್ಯಾಗುಣ ಸಂಪನ್ನನೂ ಸದಾಚಾರಿಯೂ ಆದ ಲಿಂಗಣ್ಣವೊಡೆಯನಿಗೆ ಊರ ಅಷ್ಟಾದಶ ಪ್ರಜೆಗಳು. ಗೌಡ ಕುಲಕರಣಿಯರು ಅದೇ ದಿನ ಮಾರುತೇಶನ ಪೂಜಾ ಕಾರ್ಯದ ಗೌರವವನ್ನು ಲಿಂಗಣ್ಣವೊಡೆಯನಿಗೆ ಕೊಟ್ಟಿರಬೇಕು. ಈ ಸಂಗತಿ ನಡೆದ ಬಳಿಕ ಅದೇ ದಿನ ಊರ ಕೆಲವು ಜನ ತಮ್ಮ ನ್ಯಾಯವನ್ನು ಬಗೆ ಹರಿಸಿಕೊಳ್ಳಲು ಆತನಲ್ಲಿಗೆ ಬಂದಿರಬೇಕು. ಇದು ಸಹಜ.

## ೩. ಮೂಲ ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳು

ಕವಿಯ ಕಾಲ ನಿರ್ಣಯಕ್ಕೆ ಮೂರನೆಯ ಸಂಗತಿ ಅತ್ಯಂತ ಮಹತ್ವದ್ದು: ಮಂತ್ರಾಲಯದ ಮೂಲ ರಾಘವೇಂದ್ರ ಸ್ವಾಮಿಗಳು ಮಾನ್ವಿಯಿಂದ ಆದವಾನಿಗೆ ಹೋಗುವಾಗ ಕಲ್ಲೂರಿನ ಭಕ್ತರು ತಮ್ಮ ಊರಿನಲ್ಲಿ ಕೆಲವು ದಿನ ವಾಸ್ತವ್ಯ ಮಾಡಲು ಪ್ರಾರ್ಥಿಸಿದರು. ಭಕ್ತರ ಇಚ್ಛೆಯಂತೆ ಸ್ವಾಮಿಗಳು ಆ ಊರಲ್ಲಿ ಉಳಿದರು. "ಈ ಊರಲ್ಲಿ ಯಾರಾದರೂ ಕಲಾವಿದರಿದ್ದರೆ. ಕವಿಗಳಿದ್ದರೆ ಕರೆಸಿರಿ" ಎಂದು ಸ್ವಾಮಿಗಳು ಅಪ್ಪಣೆ ಮಾಡಿದರು. ಲಿಂಗಣ್ಣವೊಡೆಯ ಕವಿಯೆಂಬುದು ಆ ಊರವರಿಗೆ ಗೊತ್ತಿತ್ತು. ಅವರು ಆತನ ಮನೆಗೆ ಹೋಗಿ ರಾಘವೇಂದ್ರ ಸ್ವಾಮಿಗಳ ಆದೇಶವನ್ನು ತಿಳಿಸಿದರು. "ನಾಳೆ ದರ್ಶನಕ್ಕೆ ಬರುತ್ತೇನೆ" ಎಂದು ಲಿಂಗಣ್ಣವೊಡೆಯ ಹೇಳಿದ. ಅದರಂತೆ ಮಾರನೆಯ ದಿನ ರಾಘವೇಂದ್ರ ಸ್ವಾಮಿಗಳ ದರ್ಶನಕ್ಕೆ ಹೋಗಿ. ಅವರ ಮುಂದೆ ಒಂದು ಪುಸ್ತಕವಿಟ್ಟು, "ಸ್ವಾಮಿಗಳೇ. ಗುರುಗಳ ದರ್ಶನಕ್ಕೆ ಬರಿಗೈಯಿಂದ ಹೋಗಬಾರದು; ಅದಕ್ಕಾಗಿ ನಾನು ತಮ್ಮ ಆದೇಶ ತಲುಪಿದ ಮೇಲೆ 'ಬಾರಮಾಸ' ವೆಂಬ ೪೩ ಪದ್ಯಗಳ ಚಿಕ್ಕಕಾವ್ಯವನ್ನು ಬರೆದು ತಂದು ನಿಮಗೆ ಅರ್ಪಿಸಿದ್ದೇನೆ. ದಯವಿಟ್ಟು, ಸ್ವೀಕರಿಸಬೇಕು" ಎಂದು ಲಿಂಗಣ್ಣವೊಡೆಯ ಅವರಿಗೆ ವಂದಿಸಿದನು. ಆ ಕಾವ್ಯವನ್ನು ಓದಿಸಿ ಕೇಳಿ ಹರ್ಷಚಿತ್ತರಾದ ರಾಘವೇಂದ್ರ ಸ್ವಾಮಿಗಳು ಲಿಂಗಣ್ಣವೊಡೆಯನಿಗೆ 'ಆಚಾರ್ಯ'

ಎಂಬ ಬಿರುದನ್ನಿತ್ತು ಗೌರವಿಸಿದರು. ಅಂದಿನಿಂದ ಲಿಂಗಣ್ಣವೊಡೆಯ ಲಿಂಗಣ್ಣಾಚಾರ್ಯನಾದ.

ಈ ಘಟನೆಗೆ ಯಾವ ಲಿಖಿತ ಆಧಾರಗಳು ಇಲ್ಲ. ೩೫೦ ವರ್ಷಗಳಿಂದ ಇಲ್ಲಿಯವರೆಗೆ ಸರ್ವಧರ್ಮದ ವಿದ್ವಾಂಸರು ಮತ್ತು ಜನರು ಈ ಘಟನೆಯನ್ನು ಹೇಳುತ್ತ ಬಂದಿದ್ದಾರೆ. ಈಗಲೂ ಕಲ್ಲೂರಿನ ಸುತ್ತಮುತ್ತ ನೂರಾರು ಹಳ್ಳಿಗಳಲ್ಲಿ ಈ ಘಟನೆ ಪ್ರಚಾರದಲ್ಲಿದೆ. ನನ್ನ ಗುರುಗಳಾದ ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ದಿ. ಶ್ರೀ ಡಿ. ಕೆ. ಭೀಮಸೇನರಾವ್ ಅವರು ಬಾರಮಾಸ ಕಾವ್ಯವನ್ನು ಕಲ್ಲೂರಿನ ಲಿಂಗಣ್ಣವೊಡೆಯ ಬರೆದಿರುವನೆಂದು ಹೇಳುತ್ತಿದ್ದರೆಂದು ಕವಿಯ ಮನೆತನದ ಪಂ. ಬಸವರಾಜ ಶಾಸ್ತ್ರಿಗಳು ನೆನಪಿಸಿಕೊಳ್ಳುತ್ತಾರೆ.

ರಾಘವೇಂದ್ರ ಸ್ವಾಮಿಗಳ ಮತ್ತು ಲಿಂಗಣ್ಣಾಚಾರ್ಯ ಕವಿಯ ಕಾಲ ಒಂದೇ ಆಗಿದೆ. ಕಲ್ಲೂರಿನ ಪ್ರಮುಖರು ಲಿಂಗಣ್ಣವೊಡೆಯನಿಗೆ ಕ್ರಿ. ಶ. ೧೬೧೧ (ಶಾ.ವಾ।ಶ।। ೧೫೩೩) ರಲ್ಲಿ ಬರೆದುಕೊಟ್ಟ ಎರಡು ಪತ್ರಗಳು ಆತನ ವ್ಯಕ್ತಿತ್ವವನ್ನು ಸರಿಯಾಗಿ ಪರಿಚಯಿಸುತ್ತವೆ. ಆತನಿಗೆ ಆಗ ಸುಮಾರು ೨೫ ವರುಷಗಳಾದರೂ ಆಗಿರಬೇಕು. ಈ ಲೆಕ್ಕದಿಂದ ಆತ ಕ್ರಿ. ಶ. ೧೫೮೬ರಲ್ಲಿ ಹುಟ್ಟಿರಬೇಕು.

ಶ್ರೀ ರಾಘವೇಂದ್ರ ಸ್ವಾಮಿಗಳು ತಂಜಾವೂರು ಜಿಲ್ಲೆಯ ಕುಂಭಕೋಣಂ[1] ಪಟ್ಟಣದಲ್ಲಿ ಕ್ರಿ.ಶ. ೧೫೯೫ರಲ್ಲಿ ಜನಿಸಿದರು. ಆದರೆ ಭುವನಗಿರಿಯಲ್ಲಿ[2] ಅವರ ಜನನವಾಯಿತೆಂದು ಶ್ರೀ ಜಿ. ಕೃಷ್ಣರಾವ್ ಹೇಳುತ್ತಾರೆ. ಇವರ ಮೊದಲ ಹೆಸರು ವೆಂಕಟನಾಥ. ತಂದೆ ತಿಮ್ಮಣ್ಣಭಟ್ಟ ಮತ್ತು ತಾಯಿ ಗೋಪಿಕಾ ದೇವಿ. ಮುಂದೆ ವೆಂಕಟನಾಥ, ಅದ್ವಿತೀಯ ಪಾಂಡಿತ್ಯಗಳಿಸಿ ಕ್ರಿ. ಶ. ೧೬೨೧ ರಲ್ಲಿ

---

೧. 'ಶ್ರೀ ರಾಘವೇಂದ್ರ ಮಹಿಮೆ' ಸಂ: ವಸಂತ ಕುಷ್ಟಗಿ. ವ್ಯಾಸಗ್ರಂಥಾಲಯ ಪ್ರಕಾಶನ. ಶಹಾಬಾದ್ ೧೯೭೭ - ಈ ಗ್ರಂಥದಲ್ಲಿ ಪ್ರೊ. ಕೆ. ಪಾಂಡುರಂಗರಾವ್ ದೇಸಾಯಿ ಅವರ ಲೇಖನ, ಪುಟ ೨.

೨. ಜಿ. ಕೃಷ್ಣರಾವ : ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳ ಚರಿತ್ರೆ. ಪ್ರ : ಪ್ರಸಾರಾಂಗ ಕ. ವಿ. ವಿ., ಧಾರವಾಡ, ೧೯೯೨ - ಪುಟ ೩.

ಸನ್ಯಾಸಾಶ್ರಮವನ್ನು ಸ್ವೀಕರಿಸಿದರು; ರಾಘವೇಂದ್ರ ತೀರ್ಥರೆಂಬ ನಾಮಪಡೆದರು. ಅವರಿಗೆ ಆಗ ೨೫ ವರ್ಷ. ಸನ್ಯಾಸಾಶ್ರಮ ಸ್ವೀಕರಿಸಿದ ಬಳಿಕ ರಾಘವೇಂದ್ರ ಸ್ವಾಮಿಗಳು ದಕ್ಷಿಣ ಭಾರತವನ್ನು ಎರಡು ಸಲ ದಿಗ್ವಿಜಯ ಮಾಡಿದರು. ಅವರ ಸಂಚಾರದಲ್ಲಿ ಶ್ರೀಗಳ ಪಾದ ಸ್ಪರ್ಶದಿಂದ ಪುನೀತವಾದ ಕೆಲವು ಮಹತ್ವದ ಸ್ಥಳಗಳನ್ನು ಅವರ ಸಂಚಾರಕ್ರಮದಲ್ಲಿ ತತ್ವವಾದದಲ್ಲಿ ಕೊಡಲಾಗಿದೆ.[೧] ಇಲ್ಲಿ ೪೧ ಹೆಸರುಗಳನ್ನು ಕೊಡಲಾಗಿದೆ. ೩೨ನೆಯ ಊರು ಮಾನ್ವಿ. ಅಲ್ಲಿಂದ ಅವರು ಆದವಾನಿ. ಶ್ರೀಶೈಲ. ತಿರುಪತಿ. ಕಂಚಿ. ಅರುಣಾಚಲ. ವೃದ್ಧಾಚಲ ಶ್ರೀ ಮುಷ್ಣ ಮತ್ತು ಮಂತ್ರಾಲಯ -. ಕ್ರಮವಾಗಿ ಮಾಡಿದ ಸಂಚಾರ ಇದು. ದಕ್ಷಿಣ ಭಾರತವನ್ನು ಎರಡು ಸಲ ದಿಗ್ವಿಜಯ ಮಾಡಲಿಕ್ಕೆ ಅವರಿಗೆ ಸುಮಾರ ೨೦ ವರುಷಗಳಾದರೂ ಹಿಡಿದಿರಬೇಕು. ಕೆಲವು ಸ್ಥಳಗಳಲ್ಲಿ ಅವರು ಬಹಳ ದಿನ ನೆಲೆಸುತ್ತಾರೆ. ಸಂಚಾರದಲ್ಲಿ ಅನೇಕ ಗ್ರಂಥಗಳನ್ನು ಬರೆಯುತ್ತಾರೆ. "............ ವಿಜಾಪೂರದ ನವಾಬ ಇಮ್ಮಡಿ ಇಬ್ರಾಹಿಮ್ ಆದಿಲ್ ಶಾಹ ಮುಸಲ್ಮಾನನಾದರೂ ರಾಯರ ಮಹಿಮೆ ಕೇಳಿ ಅವರಿಗೆ ಹಣ ಮಣಿಮು ಗೌರವಿಸಿದ. ಅಲ್ಲಿಂದ ಗುರುಗಳು ಕೃಷ್ಣಾ ತೀರದ ಆಲೂರಿಗೆ ಬಂದು ಅಲ್ಲಿಯೇ ತಮ್ಮ 'ಭಾವದೀಪ' ಎಂಬ ತತ್ವ ಪ್ರಕಾಶಿಕಾ ವ್ಯಾಖ್ಯಾನವನ್ನು ಬರೆದರು........ ಅಲ್ಲಿಂದ ರಾಯಚೂರು ಜಿಲ್ಲೆಯ ಮಾನವಿಯ ಬಳಿಯ ಪ್ರಾಣದೇವರ ಗುಡಿಯಲ್ಲಿ ಚಾತುರ್ಮಾಸ್ಯ ಸಂಕಲ್ಪ ಮಾಡಿದರು. ಚಾತುರ್ಮಾಸ್ಯ ಮುಗಿಸಿ ಮುಂದೆ ಸಂಚಾರ ಹೊರಟಾಗ ಓರ್ವ ಬ್ರಾಹ್ಮಣ ಬಾಲಕ ದನಕಾಯುತ್ತಿದ್ದ. ಗುರುಗಳಿಗೆ ಕರುಣೆ ಬಂದಿತು. ಕರೆದು ಮಂತ್ರಾಕ್ಷತೆಯಿತ್ತು ಹರಸಿದರು. ಅದೇ ಬಾಲಕ ವೆಂಕಣ್ಣ ಮುಂದೆ ಆದವಾನಿಯ ನವಾಬನ ದಿವಾನನಾದ. ಅಲ್ಲಿಂದ ಸ್ವಾಮಿಗಳು ಆದವಾನಿಗೆ ಆಗಮಿಸಿದರು. ...... ಸ್ವಾಮಿಗಳ ಕೃಪೆಯಿಂದ ಆದವಾನಿಯ ದಿವಾನನಾದ ವೆಂಕಣ್ಣ ನವಾಬನಿಂದ ಮಂಚಾಲಿಗ್ರಾಮವನ್ನು ಸ್ವಾಮಿಗಳಿಗೆ ದಾನವಾಗಿ ಕೊಡಿಸಿದ. ಇಷ್ಟೇ ಅಲ್ಲ. ಅದಕ್ಕೆ ಸೇರಿದ್ದೇ ಆದ

---

೧. 'ತತ್ವವಾದ' ಸಂಪುಟ ೧೯ ಸಂಚಿಕೆ ೮ - ಆಗಸ್ಟ್ ೧೯೭೧ - ಪುಟ ೪೫ ( ಸಂಪಾದಕರು: ಪಂಢರೀನಾಥಾಚಾರ್ಯ ಗಲಗಲಿ. ಗದಗ)

ತಿಮ್ಮಾಪುರ. ಮೊಗರೂರು ಸಹಿತವಾಗಿ ಮಂತ್ರಾಲಯವನ್ನು ನವಾಬ ಸಿದ್ದಿಮಸೂದಖಾನ ಗುರುರಾಜರಿಗೆ ದಾನ ಕೊಟ್ಟು ಭಾಗ್ಯ ಪಡೆದ. ಮುಂದೆ ರಾಯರು ಮಂಚಾಲಿಯಲ್ಲಿಯೇ ವಾಸವಾದರು."[೧]

ಶ್ರೀ ರಾಘವೇಂದ್ರ ಸ್ವಾಮಿಗಳು ಎರಡನೆಯ ದಿಗ್ವಿಜಯ ಮುಗಿಸಿ ಕೊನೆಯ ಮಂಚಾಲೆಯಲ್ಲಿ ನೆಲೆಸಿದರು ಎಂದು ಭಾವಿಸಬಹುದಾಗಿದೆ. ಈ ಎರಡನೆಯ ದಿಗ್ವಿಜಯದ ಕಾಲಕ್ಕೆ ಸ್ವಾಮಿಗಳು ಮಾನ್ವಿಯಿಂದ ಆದವಾನಿಗೆ ಹೋಗುವ ದಾರಿಯಲ್ಲಿ ಕಲ್ಲೂರ ಭಕ್ತರ ಪ್ರಾರ್ಥನೆಯನ್ನು ಮನ್ನಿಸಿ ಅಲ್ಲಿ ಕೆಲದಿನ ವಾಸ ಮಾಡಿರಬೇಕು. ೨೦ ವರ್ಷದ ಅವರ ದಿಗ್ವಿಜಯದ ಕೊನೆಯ ಕಾಲವಿದು. ಎಂದರೆ ೧೬೪೧ರ ಸುಮಾರಕ್ಕೆ ಅವರು ಕಲ್ಲೂರಿಗೆ ಬಂದಿರಬೇಕು. ಆಗ ಬಾರಮಾಸದ ಕಾವ್ಯ ಸೃಷ್ಟಿಯಾಯಿತು. ಆಗ ಕವಿ ಲಿಂಗಣ್ಣಾಚಾರ್ಯನಿಗೆ ೫೫ರ ಹರೆಯ. ಎಂದರೆ ೧೬೪೧ರಲ್ಲಿ ಆತ ಬಾರಮಾಸ ಕಾವ್ಯವನ್ನು ರಚಿಸಿದನು. ಇದರಿಂದ ಲಿಂಗಣ್ಣವೊಡೆಯನ ಕಾಲ ೧೭ನೆಯ ಶತಮಾನದ ಪೂರ್ವಾರ್ಧ; ಅದು ೪ಂರ ದಶಕ ಎಂದು ಖಚಿತವಾಗಿ ನಿರ್ಣಯಿಸಬಹುದು.

## ಒಂದು ವಿಶೇಷ

ಬಾರಮಾಸ ಕಾವ್ಯ ನಮ್ಮ ಪೂರ್ವಜರ ಜೀವನದ ಮೇಲೆ ಚೆಲ್ಲುವ ಬೆಳಕು ಪ್ರಸ್ತುತ ಜೀವನಕ್ಕೂ ಬೆಳಕಾಗಿ ನಿಲ್ಲುತ್ತದೆ. ಮುಖ್ಯವಾಗಿ ಇಲ್ಲಿ ಎರಡು ವಿಷಯಗಳನ್ನು ಗಮನಿಸಬಹುದು;

೧) ಸ್ವಾಮಿಗಳಾದವರು ಯಾವ ಊರಿಗೇ ಹೋಗಲಿ ಆ ಊರಿನ ಕವಿ. ಕಲಾವಿದರನ್ನು ಕಂಡು ಗೌರವಿಸುವುದು ಸ್ವಾಮಿಗಳಾದವರ ಕರ್ತವ್ಯವೆಂದು ಶ್ರೀ ರಾಘವೇಂದ್ರ ಸ್ವಾಮಿಗಳು ತೋರಿಸಿಕೊಟ್ಟಿದ್ದಾರೆ. ೨) ಬಾರಮಾಸ ವೈದಿಕ

---

೧. 'ತತ್ವವಾದ' ಸಂಪುಟ ೧೯. ಸಂಚಿಕೆ ೮ - ಆಗಸ್ಟ್ ೧೯೮೧ - ಶ್ರೀ ಪಂಢರೀನಾಥಾಚಾರ್ಯ ಅವರ ಲೇಖನ ಪು ೭೦.

ಈ ಮಂಚಾಲೆಯೇ ಮುಂದೆ ಮಂತ್ರಾಲಯವೆಂಬ ಹೆಸರು ಪಡೆಯಿತು. ದೇವಸ್ಥಾನದ ಮುಂದೆ'ಮಂಚಾಲೆಮ್ಮ' ಎಂಬ ಸ್ಥಳ ದೇವತೆಯ ಚಿಕ್ಕಗುಡಿಯಿದೆ. - ಸಂಪಾದಕ.

ಸಂಪ್ರದಾಯಕ್ಕೆ ಸೇರಿದ ಕಾವ್ಯ. ರಾಧೆ ಮತ್ತು ಕೃಷ್ಣರು ಈ ಕಾವ್ಯದ ನಾಯಕರು. ಕವಿ ಈ ಕಾವ್ಯದಲ್ಲಿ ವೈದಿಕರ ಸಂಪ್ರದಾಯಗಳನ್ನು, ಹಬ್ಬಗಳನ್ನು, ಆಚರಣೆಗಳನ್ನು ಮನಃಪೂರ್ವಕವಾಗಿ ವರ್ಣಿಸಿದ್ದಾನೆ. ಅಲ್ಲದೆ ಕೃಷ್ಣನ ದಶಾವತಾರಗಳನ್ನು ಸಂಕೇತಗಳ ಮೂಲಕ ಅರ್ಥಪೂರ್ಣವಾಗಿ ವಿವರಿಸಿದ್ದಾನೆ. ಲಿಂಗಣ್ಣವೊಡೆಯ ಒಬ್ಬ ಜಂಗಮನಾಗಿ ವೈದಿಕ ಧರ್ಮವನ್ನು ಅದರ ಹಬ್ಬ, ಆಚರಣೆಗಳನ್ನು ಚಿತ್ರಿಸಿರುವುದು ಪರಮತ ಸಹಿಷ್ಣುತೆ ಮತ್ತು ಪರಮತ ಗೌರವ ಸೂಚಿಸುವುದಲ್ಲದೆ ಅನ್ಯಧರ್ಮಗಳನ್ನು ಆತ ಆಳವಾಗಿ ಅಧ್ಯಯನ ಮಾಡಿದ್ದನೆಂಬುದು ಈ ಕಾವ್ಯದಿಂದ ಸಿದ್ಧವಾಗುತ್ತದೆ. ಪರಮತ ಸಹಿಷ್ಣುತೆಯ ಉದಾಹರಣೆಗಳು ನಮ್ಮ ಇತಿಹಾಸದಲ್ಲಿ ಅನೇಕ ಕಂಡು ಬರುತ್ತವೆ. ಇವುಗಳಲ್ಲಿ ಸ್ವತಃ ಸಹಿಷ್ಣುತೆ ತೋರಿದ್ದೆಷ್ಟು? ಆಳರಸರ ಒತ್ತಾಯದಿಂದ ಧರ್ಮ ಸಹಿಷ್ಣುತೆ ತೋರಿದ್ದೆಷ್ಟು? ಶ್ರೀ ವೈಷ್ಣವರು ಮತ್ತು ಜೈನರು ಪರಸ್ಪರ ಕಲಹ ಮಾಡಿಕೊಂಡಾಗ ಬುಕ್ಕದೊರೆ ಅವರನ್ನು ಒಂದುಗೂಡಿಸುತ್ತಾನೆ. ಇಂಥ ಒತ್ತಾಯದ ಪರಮತ ಸಹಿಷ್ಣುತೆ ಇತಿಹಾಸದ ಪುಟಗಳಲ್ಲಿ ಅಲ್ಲಲ್ಲಿ ಕಂಡು ಬರುತ್ತದೆ. ಆದರೆ ಇದಕ್ಕಿಂತ ಮಿಗಿಲಾದ ಯಾರ ಒತ್ತಾಯಕ್ಕೂ ಒಳಗಾಗದ ಎಲ್ಲ ಧರ್ಮದವರು ಪರಸ್ಪರ ಅನ್ಯೋನ್ಯವಾಗಿ ಬಾಳಿದ ಉದಾಹರಣೆಗಳೂ ಸಾಕಷ್ಟಿವೆ. ಇದು ನಿಜವಾದ ಸಹಿಷ್ಣುತೆ ಮತ್ತು ಗೌರವ. ಲಿಂಗಣ್ಣವೊಡೆಯ ಬದುಕಿದ ಪ್ರದೇಶದಲ್ಲಿ ಈ ಧರ್ಮ ಸಹಿಷ್ಣುತೆ ಮತ್ತು ಪರಮತ ಗೌರವ ನೆಲದ ಗುಣವೇ ಆಗಿದೆ. (ಇದು ಕನ್ನಡನಾಡಿನ ಎಲ್ಲ ಪ್ರದೇಶಕ್ಕೂ ಅನ್ವಯಿಸುತ್ತದೆ) ರಾಘವೇಂದ್ರ ಸ್ವಾಮಿಗಳು ಹೇಳಿಕಳಿಸಿದಾಗ ಪುರೋಹಿತರು ಅವರ ಆದೇಶವನ್ನು ಲಿಂಗವೊಡೆಯನಿಗೆ ಗೌರವದಿಂದ ಮುಟ್ಟಿಸಿದುದೂ ಲಿಂಗವೊಡೆಯ ಗುರುಕಾಣಿಕೆಯೆಂದು ಸ್ವಾಮಿಗಳ ಮುಂದೆ ಕಾವ್ಯವನ್ನಿಟ್ಟು ವಂದಿಸಿದುದೂ ಮತ್ತು ರಾಘವೇಂದ್ರ ಸ್ವಾಮಿಗಳು ಆ ಕಾವ್ಯವನ್ನು ಮೆಚ್ಚಿ ಆತನಿಗೆ 'ಆಚಾರ್ಯ' ಎಂಬ ಬಿರುದು ಕೊಟ್ಟುದೂ ಮತ ಸೌಹಾರ್ದತೆ ಮತ್ತು ಧರ್ಮ ಗೌರವವನ್ನು ತೋರಿಸುವುದಲ್ಲದೆ ಕಾವ್ಯ, ಪ್ರತಿಭೆ, ಕಲೆ-ಇವು ಮತ ಧರ್ಮಗಳಿಗಿಂತ ಶ್ರೇಷ್ಠವಾದವುಗಳು ಮತ್ತು ಪ್ರೀತಿಯಿಂದ ಕೂಡಿ ಬಾಳುವುದೇ

ಮಾನವೀಯತೆಯು - ಎಂಬ ಸಂದೇಶವೂ ಇದರಲ್ಲಿ ಅಡಗಿದೆ. ಈ ಸಂದೇಶವು ಸಾರ್ವಕಾಲಿಕವಾದುದು. ಪ್ರಸ್ತುತ ಬದುಕಿಗೆ ಅತ್ಯವಶ್ಯವಾದುದು.[೧]

## ಕವಿಯ ವಂಶಾವಳಿ

ಲಿಂಗಣ್ಣಾಚಾರ್ಯನ ವಂಶಾವಳಿಯನ್ನು ಆತನ ಮೊಮ್ಮಗನಾದ ಲಿಂಗಣ್ಣನು ತನ್ನ 'ಪರಂಪ್ಮ ರತ್ನಾಕರ' ಕಾವ್ಯದಲ್ಲಿ ಹೇಳಿಕೊಂಡಿದ್ದಾನೆ. ಎರಡು ಷಟ್ಪದಿಗಳಲ್ಲಿ (ಸಂಧಿ ೧. ಪದ್ಯ ೨೮. ೨೯) ವಂಶಾವಳಿಯಿದೆ:

ಸಸಿನ ಚರಮೂರ್ತಿಗಳು ಧೂಪದ
ಬಸವರಾಜರೆನುತ್ತ ಕರೆಯಲು
ವಸುಧೆಗೆಸೆಯಿತು ನಾಮವಾತನ ಪುತ್ರ ಸಿದ್ಧಯನ
ಶಿಶುವು ಕರಿಬಸವನ ಕುಮಾರಕ
ನಸಮ ಸಿದ್ಧಯನಾತ್ಮಜಾತನೆ
ನಿಸುವ ಹಿರೆತಮ್ಮಯ್ಯನ ವೀರಾಂಬೆಯರ ಗರ್ಭಾಬ್ಧಿ

ಇಂಗದಿರನೆನಿಪಮಲ ಧೂಪದ
ಲಿಂಗನಾತ್ಮಜ ರುದ್ರನಾತ್ಮಜ
ಲಿಂಗನೊರೆದನು ಮಾರಟೇಶ್ವರಲಿಂಗ ಸ್ವಪ್ನದಲಿ
ಜಂಗಮಾಕೃತಿಯಿಂದೆಯಿದಿ ಈ
ಸಾಂಗಕೃತಿ ಪೇಳೆನುತೊರೆಯೆ ಜ್ಞಾ
ನಾಂಗನೆಗೆ ಮೃಡನಾಣತಿಯಲಾನೊರೆದೆನೀ ಕೃತಿಯಾ

---

೧. ಇತ್ತೀಚೆಗೆ ನಮ್ಮ ದೇಶದಲ್ಲಿ 'ಕೋಮು ಸೌಹಾರ್ದತೆ' ಎಂಬ ಮಾತು ಕೇಳಬರುತ್ತದೆ. ಸಭೆ. ಸಮ್ಮೇಳನ ಮೆರವಣಿಗೆ ನಡೆಸಿ ಪ್ರಚಾರ ಮಾಧ್ಯಮಗಳ ಮೂಲಕ ಇದರ ಪ್ರಚಾರ ದೇಶದ ತುಂಬ ಮಾಡತೊಡಗಿದ್ದಾರೆ. ಕೇವಲ ಪ್ರಚಾರದಿಂದ ಇದು ಸಾಧ್ಯವಾಗದ ವಿಷಯ. ನಮ್ಮ ಹಿರಿಯರು ಅಡದೆ ಮಾಡಿ ತೋರಿಸಿದರು; ನಡೆದು ತೋರಿಸಿದರು. ಅಂತಹ ನಡೆ-ನುಡಿ ನಮಗೀಗ ಬೇಕಾದುದು; ಸಭೆ ಸಮ್ಮೇಳನಗಳಲ್ಲ. - ಸಂಪಾದಕ

- ಧೂಪದ ಬಸವರಾಜ
  - ಸಿದ್ಧಯ್ಯ
    - ಕರಿಬಸವ
      - ಸಿದ್ಧಯ್ಯ
        - ಹಿರಿಯ ತಮ್ಮಯ್ಯ - ವೀರಾಂಬೆ (ಹೆಂಡತಿ)
          - ಲಿಂಗ
            - ರುದ್ರ
              - ಲಿಂಗ
                - .
                - .
                - .
                - ನಾಗಬಸಯ್ಯ (ಮಕ್ಕಳಿಲ್ಲ) - ಚೆನ್ನಯ್ಯ (ಕ್ರಿ. ಶ. ೧೮೪೨ ರಲ್ಲಿ ನಿಧನ)
                  - ಲಿಂಗಯ್ಯ - ವೀರಮ್ಮ (ಹೆಂಡತಿ)
                    - ಸೂಗೂರುಶಾಸ್ತ್ರಿ
                    - ಬಸವಲಿಂಗಮ್ಮ
                    - ಬಸವರಾಜಶಾಸ್ತ್ರಿ (ಜೀವಿಸಿದ್ದಾರೆ ೮೦ ವರ್ಷ)

ಬಾರಮಾಸ ಮತ್ತು ವರರಮ್ಯ ರತ್ನಾಕರ ಎರಡೂ ಕಾವ್ಯಗಳನ್ನು ಒಬ್ಬರೇ ಬರೆದಿರುವರೆಂದು ಮೊದಲು ನಂಬಲಾಗಿತ್ತು. ವರರಮ್ಯ ರತ್ನಾಕರ ಮತ್ತು ಹಿರೇತಮ್ಮಯ್ಯನ ಮಗ ಲಿಂಗವೊಡೆಯನಿಗೆ ಕಲ್ಲೂರ ಭಕ್ತರು ಬರೆದುಕೊಟ್ಟ ಎರಡು ಪತ್ರಗಳಿಂದ ಎರಡು ಕಾವ್ಯಗಳ ಕರ್ತೃಗಳು ಬೇರೆ ಬೇರೆಯೆಂದು ಆಮೇಲೆ ತಿಳಿದು ಬಂತು.[1] ಪತ್ರಗಳಲ್ಲಿ ಹಿರೇತಮ್ಮಯ್ಯನ ಮಗ ಲಿಂಗಣ್ಣನೆಂದು ಹೇಳಿದಂತೆ ವರರಮ್ಯ ರತ್ನಾಕರದಲ್ಲಿಯೂ ಹಿರೇತಮ್ಮಯ್ಯನ ಮಗನು ಲಿಂಗಣ್ಣನೆಂದು ಹೇಳಲಾಗಿದೆ. ವರರಮ್ಯ ರತ್ನಾಕರದ ಲಿಂಗಣ್ಣ ವಂಶಾವಳಿ ಹೇಳುವಾಗ ತನ್ನ ತಾತನಾದ ಲಿಂಗಣ್ಣನ ಹೆಸರನ್ನು ಬಹಳ ಗೌರವದಿಂದ ಹೇಳುತ್ತಾನೆ. ಹಿರೇ ತಮ್ಮಯ್ಯನ ಮತ್ತು ವೀರಾಂಬೆಯರ ಗರ್ಭಾಬ್ಧಿಯಲ್ಲಿ ಇಂಗದಿರನಂತೆ ಲಿಂಗಣ್ಣ ಜನಿಸಿದನೆಂದು ಹೇಳಿ ಆತನ ಗೌರವವನ್ನು ಹೆಚ್ಚಿಸಿದ್ದಾನೆ. ಬಾರಮಾಸದ ಕವಿ ಲಿಂಗಣ್ಣನ ವ್ಯಕ್ತಿತ್ವ, ಪಾಂಡಿತ್ಯ ಮೊಮ್ಮಗನಿಗೆ ಚೆನ್ನಾಗಿ ತಿಳಿದಿದೆ. ಮೊಮ್ಮಗ ಲಿಂಗಣ್ಣನ ವರರಮ್ಯ ರತ್ನಾಕರವೂ ಒಂದು ಶ್ರೇಷ್ಠ ಕಾವ್ಯ. ೨೧೦೦ ಭಾಮಿನೀ ಷಟ್ಪದಿಗಳ ಈ ಕಾವ್ಯದ ಶೈಲಿ ಬಂಧುರವೂ ಲಲಿತವೂ ಆಗಿದೆ. ಭಾಮಿನೀ ಷಟ್ಪದಿಯ ಝೇಂಕಾರ ಅದರ ಲಯ ಗತಿ ಮೃದುತ್ವ ಗೇಯತನ ಈ ಕಾವ್ಯದ ಸೊಗಸನ್ನೂ ಮಹೋನ್ನತಿಯನ್ನೂ ಹೆಚ್ಚಿಸಿವೆ.

ವರರಮ್ಯ ರತ್ನಾಕರ ಬರೆದ ಕವಿ ಲಿಂಗಣ್ಣ ತರುವಾಯ ಮುಂದುವರೆದ ವಂಶದ ಪೂರ್ಣ ಚಿತ್ರ ದೊರಕುವುದಿಲ್ಲ. ಆದರೆ ಧೂಪದ ಮನೆತನದ ಈಗ ಜೀವಿಸಿರುವ ಎಂಬತ್ತರ ಹರೆಯದ ಮಾರಟೇಶ್ವರ ಅರ್ಚಕರಾದ ಪಂ. ಬಸವರಾಜಶಾಸ್ತ್ರಿಗಳು ತಮ್ಮ ತಾತ ಚೆನ್ನಯ್ಯನಿಂದ ಈಚಿನ ವಂಶದ ವಿವರಗಳನ್ನು ಹೇಳುತ್ತಾರೆ. ಮತ್ತು ವರರಮ್ಯ ರತ್ನಾಕರದ ಕವಿಯ ಬಳಿಕ ತಮ್ಮ ತಾತನವರೆಗೆ ಮೂರು ತಲೆಮಾರುಗಳು ಆಗಿ ಹೋಗಿರಬೇಕೆಂದು ಊಹಿಸುತ್ತಾರೆ. ಅವರ ಈ ಊಹೆಯನ್ನು ನಂಬದಿರಲು ಯಾವ ಕಾರಣಗಳೂ ಇಲ್ಲ. ವಂಶಾವಳಿಯಲ್ಲಿ ವರರಮ್ಯ ರತ್ನಾಕರದ ಕವಿ ಲಿಂಗಣ್ಣನ ಬಳಿಕ ಇಟ್ಟ ಮೂರು ಚುಕ್ಕೆಗಳು ಪಂ. ಬಸವರಾಜಶಾಸ್ತ್ರಿಗಳು ಊಹಿಸುವ ಮೂರು ತಲೆಮಾರುಗಳನ್ನು ಸೂಚಿಸುತ್ತವೆ.

---

೧. ಪಂ. ಬಸವರಾಜ ಶಾಸ್ತ್ರಿಗಳು ಇದನ್ನು ಮೊದಲು ಕಂಡುಹಿಡಿದವರು.

# ಕಾವ್ಯ

ಲಿಂಗಣ್ಣನ ಬಾರಮಾಸ ಅನೇಕ ವೈಶಿಷ್ಟ್ಯಗಳಿಂದ ಕೂಡಿದೆ. ಹಿಂದಿ, ಉರ್ದು ಮತ್ತು ಇತರ ಬಾರಮಾಸಗಳಲ್ಲಿ ಈ ವೈಶಿಷ್ಟ್ಯಗಳಿಲ್ಲ. ಅಸಾಧಾರಣ ಶಾಸ್ತ್ರಜ್ಞಾನ, ಪ್ರಪಂಚ ಜ್ಞಾನವುಳ್ಳ ಈ ಕವಿ ಬೇರೆಡೆ ಕಾಣದ ಅನೇಕ ಹೊಸಲೋಕಗಳನ್ನು ನಮ್ಮೆದುರಿಗೆ ತೆರೆದಿಡುತ್ತಾನೆ.

ಬಾರಮಾಸಗಳು ಜಾನಪದ ಕಾವ್ಯಗಳೇ ಆಗಿರುತ್ತವೆ. ಅವು ದೇಸಿಗೆ ಒತ್ತುಕೊಡುತ್ತವೆ. ಲಿಂಗಣ್ಣ ಮಾರ್ಗ ಮತ್ತು ದೇಸಿ (ಜಾನಪದ) ಎರಡನ್ನೂ ಬಳಸಿ ಹೊಸದನ್ನು ಸೃಷ್ಟಿಸಿದ್ದಾನೆ. ಆತನ ಕಾವ್ಯ ಪ್ರತಿಭೆ ಮತ್ತು ಕಾವ್ಯ ಶಿಸ್ತು ನಮ್ಮನ್ನು ದಂಗು ಬಡಿಸುತ್ತದೆ. ೪೩ ಪದ್ಯಗಳ ಈ ಚಿಕ್ಕ ಕಾವ್ಯ ವೈವಿಧ್ಯದ ಒಂದು ಸುಂದರ ಲೋಕ.

೪೩ ಪದ್ಯಗಳಲ್ಲಿ ಪ್ರಾರಂಭಕ್ಕೆ ಎರಡು ಜನಪದ ಧಾಟಿಯ ಪದ್ಯಗಳಿಂದ ಕಾವ್ಯದ ವಸ್ತುವನ್ನು ಸೂಕ್ಷ್ಮವಾಗಿ ಹೇಳುತ್ತ ಓದುಗರ ಹೃದಯಗಳನ್ನು ಸೆರೆ ಹಿಡಿಯುತ್ತ ಕುತೂಹಲ ಕೆರಳಿಸುತ್ತಾನೆ. ಒಂದು ವಿಷಯದಲ್ಲಿ ನಮ್ಮನ್ನು ತುಸು ಗೊಂದಲಕ್ಕೀಡು ಮಾಡುತ್ತಾನೆ. ಬಲಾರಣ್ಯಕ್ಕೆ ಹೋಗುವೆನೆಂದು ಕೃಷ್ಣ ಹೇಳಿದರೆ ನಾಲ್ಕನೆಯ ವೃತ್ತದಲ್ಲಿ ದ್ವಾರಕೆಗೆ ಕೃಷ್ಣ ಹೋದನೆಂದು ರಾಧೆ ಹೇಳುತ್ತಾಳೆ; ಎಲ್ಲಿಗೇ ಹೋಗಿರಲಿ, ರಾಧೆಯ ಪಾಲಿಗೆ ವಿರಹ ಆತು ಬಂತು.

ಮೂರನೆಯ ಪದ್ಯದಿಂದ ಒಂದೊಂದು ಮಾಸಕ್ಕೆ ಒಂದು ಶ್ಲೋಕ, ಒಂದು ವೃತ್ತ ಮತ್ತು ಒಂದು ಪದ - ಹೀಗೆ ಹನ್ನೆರಡು ಮಾಸಕ್ಕೆ ಹೆಣೆಯುತ್ತಾನೆ. ಹನ್ನೆರಡು ಮಾಸಗಳ ಬಳಿಕ ಮೂರು ಪದ್ಯಗಳಲ್ಲಿ ಕೃಷ್ಣನ ಆಗಮನವನ್ನು ಮತ್ತು ಮಿಲನವನ್ನು ವರ್ಣಿಸಿ ೪೨ನೆಯ ವೃತ್ತ ಮತ್ತು ೪೩ನೆಯ ಪದದಲ್ಲಿ ಕಾವ್ಯಪಠಿಸುವವರಿಗೆ ದೊರೆವ ಅರ್ಥ, ಸಂಪತ್ತು ಮತ್ತು ಕಲ್ಲೂರು ಗ್ರಾಮವನ್ನು ವರ್ಣಿಸುತ್ತ ತನ್ನ ಅಂಕಿತವನ್ನು ಸೂಚಿಸುತ್ತಾನೆ.

ಶ್ಲೋಕ ಇಲ್ಲಿ ಮೂಲ ಶ್ಲೋಕದ ರಚನೆಯಲ್ಲಿ ಇಲ್ಲ. ಶ್ಲೋಕ ಕನ್ನಡಿಗರಿಗೆ ಅಚ್ಚಿಬರಲಿಲ್ಲ; ಅವರ ಭಾವದೀಪ್ತಿಗೆ ಹೊಂದಿಕೆಯಾಗಲಿಲ್ಲ;

ಸಮರ್ಥ ವಾಹಕವಾಗಲಿಲ್ಲ. ಆದರೆ ಜನಪದ ಕವಿಗಳು ಅಲ್ಲಲ್ಲಿ ಶ್ಲೋಕವೆಂದು ಬಳಸುತ್ತ ಬಂದಿದ್ದಾರೆ. ಅದು ಶ್ಲೋಕವಾಗಿರದೆ ಪದವೋ ವೃತ್ತವೋ ಆಗಿರುತ್ತದೆ. ಇದರಂತೆ ಲಿಂಗಣ್ಣ ಕವಿ ಶ್ಲೋಕವೆಂದು ಹೆಸರಿಟ್ಟು ಬರೆದ ಪದ ವೃತ್ತವಾಗಿದೆ; ಅದೂ ಮಾಲಿನೀ ವೃತ್ತ. ಎರಡನೆಯದಾಗಿ ಈತ ಶಾರ್ದೂಲ ವಿಕ್ರೀಡಿತ ಮತ್ತು ಮತ್ತೇಭ ವಿಕ್ರೀಡಿತ ವೃತ್ತಗಳನ್ನು ಬಳಸಿದ್ದಾನೆ. ಮೂರನೆಯದಾಗಿ ಒಂದು ಪದ. ಕಾವ್ಯದಲ್ಲಿ ಬಳಕೆಯಾದ ಶ್ಲೋಕಗಳೆಲ್ಲ ಮಾಲಿನೀ ವೃತ್ತಗಳೇ ಆಗಿವೆ.

ಬಾರಮಾಸಗಳಲ್ಲಿ ಕವಿ ಸೂತ್ರಧಾರ ಅಷ್ಟೆ. ತನ್ನ ವಿರಹದುರಿಯನ್ನು ತೋಡಿಕೊಳ್ಳುವವಳು ವಿರಹಿಣಿಯೇ. ಕೆಲವು ಬಾರಮಾಸಗಳಲ್ಲಿ ಪೀಠಿಕೆಯ ಮತ್ತು ಪ್ರಾರ್ಥನೆಯ ರೂಪದಲ್ಲಿ ಕವಿ ಮಾತಾಡುತ್ತಾನೆ. ಈ ಕಾವ್ಯದಲ್ಲಿಯೂ ಕವಿ ಹೀಗೆ ಮಾಡಿದ್ದಾನೆ. ಸ್ವಾರಸ್ಯದ ಮತ್ತು ಇತರೆಡೆ ಸಿಕ್ಕದ ವಿಷಯವೆಂದರೆ ತನ್ನ ಬರುವಿಕೆಯನ್ನು ಒಂದು ಋತು ತಾನೇ ಹೇಳಿಕೊಳ್ಳುತ್ತದೆ - ಈ ಬಾರಮಾಸದಲ್ಲಿ: (ಶ್ಲೋಕ ೧೨. ಶಿಶಿರ ಋತು)

ಹಿಂದಿಯಾದಿಯಾಗಿ ಅನೇಕ ಭಾಷೆಗಳ ಬಾರಮಾಸಗಳು ಆಷಾಢ ಮಾಸದಿಂದಲೇ ಪ್ರಾರಂಭವಾಗುತ್ತವೆ. ಅಲ್ಲೊಂದು ಇಲ್ಲೊಂದು ಬೇರೆ ಬೇರೆ ಮಾಸಗಳಿಂದ ಪ್ರಾರಂಭವಾಗುವ ಬಾರಮಾಸಗಳಿದ್ದರೂ ಆಷಾಢದಿಂದಲೇ ಪ್ರಾರಂಭವಾಗಬೇಕೆಂಬ ಒಂದು ಸಂಪ್ರದಾಯ ಬೆಳೆದು ಬಂದಿದೆ.

ಲಿಂಗಣ್ಣ ಕವಿ ತನ್ನ ಬಾರಮಾಸವನ್ನು ಮಾರ್ಗಶಿರ ಮಾಸದಿಂದ ಪ್ರಾರಂಭ ಮಾಡುತ್ತಾನೆ. ಇಲ್ಲಿ ಒಂದು ವೈಶಿಷ್ಟ್ಯವಿದೆ. ವೈದಿಕರ ಪ್ರಕಾರ ವರ್ಷದ ಮೊದಲ ಮಾಸ ಮಾರ್ಗಶಿರವೇ. ಈಗ ಚೈತ್ರದಿಂದ ಪ್ರಾರಂಭಿಸುವ ನಡೆ ತಪ್ಪು. ಅದು ಹೇಗೆ. ಎಂದು ಬಳಕೆಯಲ್ಲಿ ಬಂತೊ! "ಮಾಸಾನಂ ಮಾರ್ಗಶೀರ್ಷೋಹಂ" ಎಂಬುದು ಶ್ರೀಕೃಷ್ಣನ ಉಕ್ತಿ. ಆತ ಭಗವದ್ಗೀತೆಯಲ್ಲಿ ತನ್ನ ವಿಭೂತಿ ರೂಪಗಳನ್ನು ಹೇಳಿಕೊಳ್ಳುವಾಗ ತಾನು ಯಾರು ಯಾರು ಏನು ಏನು ಎಂದು ಸ್ಪಷ್ಟಪಡಿಸುತ್ತಾನೆ. ಆಗ ತಾನು ವೃಕ್ಷದಲ್ಲಿ ಅಶ್ವತ್ಥ. ದೈತ್ಯರಲ್ಲಿ ಪ್ರಹ್ಲಾದ. ಮಾಸಗಳಲ್ಲಿ ಮಾರ್ಗಶಿರ ಎಂದು ಮುಂತಾಗಿ ಹೇಳುತ್ತಾನೆ. ಇದೆಲ್ಲ ಬಲ್ಲ ಲಿಂಗಣ್ಣವೊಡೆಯ ತನ್ನ ಬಾರ ಮಾಸಕ್ಕೆ ಮೊದಲಮಾಸ ಮಾರ್ಗಶಿರವನ್ನೇ ಆರಿಸಿಕೊಂಡಿದ್ದಾನೆ.

ಮಾರ್ಗಶಿರ ಮಾಸದ ವಿಶೇಷಕ್ಕೆ ಇನ್ನೊಂದು ಕಾರಣವೂ ಇದೆ. ಹನ್ನೆರಡು ತಿಂಗಳಿಗೆ ವಿಷ್ಣುವಿನ ಹನ್ನೆರಡು ಹೆಸರುಗಳಿವೆ: ಕೇಶವದಿಂದ ದಾಮೋದರವರೆಗೆ. ಕೇಶವ ಮಾರ್ಗಶಿರ ಮಾಸಕ್ಕೆ ಬಂದ ಹೆಸರು. ಕೇಶವದಿಂದಲೇ ಹೆಸರುಗಳ ಪ್ರಾರಂಭ. ಸಹಜವಾಗಿ ಮಾರ್ಗಶಿರವೇ ವರ್ಷದ ಆದಿ. ಪ್ರತಿಮಾಸದ ಪದದಲ್ಲಿ ಆಯಾಮಾಸಕ್ಕೆ ಇರುವ ವಿಷ್ಣುವಿನ ಹೆಸರನ್ನು ಕವಿ ಹೇಳುತ್ತ ಹೋಗುತ್ತಾನೆ. (ಅನುಬಂಧ ನೋಡಿರಿ)

ಅವತಾರಗಳು ಬೇರೆ ಯಾವ ಭಾಷೆಯ ಬಾರಮಾಸಗಳಲ್ಲಿಲ್ಲ. ವಿರಹ, ನಿಸರ್ಗ, ಋತು, ವಾತಾವರಣ, ಹಬ್ಬಹುಣ್ಣಿವೆ - ಇವುಗಳ ವರ್ಣನೆಯಿದೆ. ಲಿಂಗಣ್ಣನ ಕಾವ್ಯದಲ್ಲಿರುವ ಹತ್ತು ಅವತಾರಗಳ ವರ್ಣನೆಯು ಕಾವ್ಯಲೋಕಕ್ಕೆ ಒಂದು ಹೊಸ ಕೊಡುಗೆ. ವಿಷ್ಣುವಿನ ಹೆಸರುಗಳನ್ನು ಪದಗಳಲ್ಲಿ ಹೇಳಿದರೆ ಅವತಾರಗಳನ್ನು ಸಂಕೇತದಿಂದಲೇ ಸೂಚಿಸುತ್ತಾನೆ. ಮಾಘಮಾಸದಿಂದ ಅವತಾರಗಳ ವರ್ಣನೆ ಮೊದಲಾಗುತ್ತದೆ. ಮಾಘದಿಂದ ಯಾಕೆ ಮೊದಲು ಮಾಡಿದನೆಂದು ತಿಳಿಯದು. ನಿಸರ್ಗ ವರ್ಣನೆ ಮತ್ತು ಋತು ವರ್ಣನೆಯೊಡನೆ ಅವತಾರದ ಕಲ್ಪನೆಯನ್ನು ನಮ್ಮಲ್ಲಿ ಮೂಡಿಸುವ ಕೌಶಲ ಅದ್ಭುತವಾದುದು. ಕೃತಕತೆಯಿಲ್ಲ; ಬೇಕೆಂತಲೇ ಎಳೆದು ತರುವದಿಲ್ಲ. ಉಸಿರಾಡಿಸಿದಷ್ಟೇ ಸಹಜವಾಗಿ ಹಬ್ಬಗಳ ವರ್ಣನೆಯೊಂದಿಗೆ ವಿಷ್ಣುವಿನ ನಾಮ ಮತ್ತು ಋತುವರ್ಣನೆಯೊಂದಿಗೆ ಅವತಾರದ ಹೆಸರು ನಮ್ಮ ಅರಿವಿಗೆ ಬರುತ್ತವೆ. ಪದಗಳಲ್ಲಿ ವಿರಹವನ್ನೂ, ಎದೆಯ ಅಳಲನ್ನೂ, ಸಿಟ್ಟುರೋಷವನ್ನೂ ಹಬ್ಬ ಹುಣ್ಣಿವೆಗಳ ಮೂಲಕ ಹೊರಹಾಕುತ್ತ ಒಂದು ಸಾಮಾಜಿಕ ವಾತಾವರಣವನ್ನು ನಿರ್ಮಿಸಿ ಅದರಲ್ಲಿ ಓದುಗರು ಲೀನವಾಗುವಂತೆ ಮಾಡುವ ಲಿಂಗಣ್ಣನ ಪ್ರತಿಭೆ, ಅಸಾಧಾರಣವಾದುದೆಂದೇ ಹೇಳಬೇಕು. ಸಂಕೇತ ಪ್ರತಿಮೆ, ಪ್ರತೀಕ, ಉಪಮೆ, ರೂಪಕಗಳಲ್ಲಿಯೇ ಅವತಾರಗಳ ಒಡಲನ್ನೇ ಈ ಕವಿ ತೆರೆದಿಡುತ್ತಾನೆ.

ಯುವತೀಕೇಳು ವಿದೇಹದೇಹಸುಡುವಂ ತಾನಾದುದಂ ತೋರ್ಪವೋಲ್
ಜವಳೀಪೂಸರದಿಂದಲೆಚ್ಚು ಸುಡುವಂ ತಾಪಕ್ಕಹೋರಾತ್ರಿಯಂ
ಎವೆಗಳ್ ಮುಚ್ಚದೆ ಕೃಷ್ಣ ತನ್ನ ಪಥಮಂ ನೋಳ್ಪಂತೆ ತಾ ಮಾಡಿದಂ
ಅವನೇ ಬಂದಡೆ ಕಣ್ಣಮುಚ್ಚದವೊಲುಂ ನಾಮಾಳ್ಪೆಂ ಸಖೀರತ್ನವೇ

ಕಣ್ಣು ಮುಚ್ಚಲಾರದ್ದು ಮೀನು. ಇದು ಮತ್ಸ್ಯಾವತಾರ; 'ವಿದೇಹ ದೇಹಸುಡುವಂ ತಾನಾದುದಂ ತೋರ್ಪವೋಲ್' ಎನ್ನುವಲ್ಲಿ ಇನ್ನೊಂದು

ಪೌರಾಣಿಕ ಕಥೆ ಬಿಚ್ಚಿಕೊಳ್ಳುತ್ತದೆ. ವಿದೇಹ ದೇಹ ಸುಡುವಂ ಎಂಬಲ್ಲಿ 'ದೇಹ ಇಲ್ಲ'; 'ದೇಹ ಇದೆ' ಇವುಗಳ ವೈರುಧ್ಯ ಮತ್ತು ಅವುಗಳಲ್ಲಿರುವ ಧ್ವನಿ ವಿರಹ ಧ್ವನಿಯಾಗುವುದು ಅಪರೂಪವಾದುದು. ಕಾಮನು ರಾಧೆಯ ಎರಡು ಕಂಗಳಿಗೆ ಜವಳೀ ಹೂಬಾಣ ಬಿಟ್ಟುದರ ಫಲ ಹಗಲಿರುಳು ಕಣ್ಮುಚ್ಚಲಿಕ್ಕೆ ಬಾರದಾದುದು - ಅವನಿಗೂ ಕಣ್ಮುಚ್ಚದಂತೆ ಮಾಡುವೆನೆಂಬ ಆಕೆಯ ಛಲ ಈ ಸಾಲುಗಳ ಒಡಲಲ್ಲಿ ಅತಿ ಸೂಕ್ಷ್ಮವಾಗಿ ಅಡಗಿರುವ ಕಥೆಗಳು, ಕಲ್ಪನೆಗಳು, ವೇದನೆಗಳು, ಸಿಟ್ಟುರೋಷಗಳು, ನಮ್ಮ ಕಣ್ಮುಂದೆ ಕಟ್ಟುತ್ತವೆ. (ತಮ್ಮ ರೇಖೆಗಳಲ್ಲಿ ಅದ್ಭುತ ಹಿಡಿದಿಡುವ ಮಹಾಚಿತ್ರ ಕಲಾವಿದ ಹೆಬ್ಬಾರರ ನೆನಪಾಗುತ್ತದೆ ಇಲ್ಲಿ.)

ಮೀನು ಒಂದು ಅವತಾರ; ಇರಲಿ. ಅದು ಕಾಮದ ಸಂಕೇತವಾಗಿಯೂ ಇಲ್ಲಿ ಧ್ವನಿಸುತ್ತಿದೆಯೆಂಬುದಕ್ಕೂ ಅವಕಾಶವಿದೆ.

ಲಿಂಗಣ್ಣನ ಕಲ್ಪನಾಶಕ್ತಿ, ರಚನಾ ಚಾತುರ್ಯ, ಸೂಕ್ಷ್ಮಮತಿ, ಸಹಜ ಪ್ರತಿಭೆಗಳಿಂದ ಒಂದೇ ವೃತ್ತದಲ್ಲಿ (ವೃತ್ತ೪೦) ಅದೂ ರಾಧಾಕೃಷ್ಣರ ಮಿಲನದಲ್ಲಿ-ಹತ್ತು ಅವತಾರಗಳನ್ನು ಸೂಚ್ಯವಾಗಿ ಮೂಡಿಸಿದುದು ಕಾವ್ಯಲೋಕದಲ್ಲಿ. ಇದೊಂದು ಹೊಸ ಆವಿಷ್ಕಾರವೆನಿಸಿದರೆ ಆಶ್ಚರ್ಯವಲ್ಲ. (ಅನುಬಂಧ ನೋಡಿರಿ). ಇಂಥ ಕಲ್ಪನೆಗಳು ಹಿಂದಿನ ಕಾವ್ಯಗಳಲ್ಲಿ ಇಲ್ಲವೆಂದು ನನ್ನ ಅಭಿಪ್ರಾಯವಲ್ಲ. ಆದರೆ ಅನೇಕ ಕಡೆ ಈ ಕಲ್ಪನೆಗಳು ಚಮತ್ಕಾರಗಳಾಗಿ ಪರಿಣಮಿಸಿದ್ದೂ ಉಂಟು. ಲಿಂಗಣ್ಣವೊಡೆಯ ಇಂಥ ಚಮತ್ಕಾರಗಳಿಂದ ಬಹುದೂರ.

ವಸ್ತುವಿಗೆ ತಕ್ಕಂತೆ ಋತುಗಳ ವರ್ಣನೆ ಸಹಜವಾಗಿ ಮೂಡಿಬರುತ್ತದೆ. ಇದು ಬಹುಕಷ್ಟದ ಕಾರ್ಯ. ಸಮರ್ಥನಾದ ಕವಿ ಮಾತ್ರ ಭಾಷೆಯನ್ನು, ಪ್ರತಿಮೆ ಸಂಕೇತಗಳನ್ನು ದುಡಿಸಿಕೊಂಡು ತನ್ನ ಕಾವ್ಯದ ವಸ್ತುವಿಗೆ ಅರ್ಥಧ್ವನಿಯನ್ನು ಹೆಚ್ಚಿಸಿಕೊಳ್ಳುತ್ತಾನೆ. ಬಾರಮಾಸದ ಪ್ರಾರಂಭದ ಮಾಸವೇ ಧ್ವನಿಪೂರ್ಣವಾಗಿದ್ದು ಓದುಗರು ಕುತೂಹಲಿಗಳಾಗಿ ಕಥೆಯಲ್ಲಿ ತಾದಾತ್ಮ್ಯ ಹೊಂದುತ್ತಾರೆ. ಶಾಸ್ತ್ರಶುದ್ಧವಾಗಿ, ಸಂಪ್ರದಾಯಕ್ಕನುಗುಣವಾಗಿ ವರ್ಷದ ಮೊದಲ ಮಾಸವಾದ ಮಾರ್ಗಶಿರ ಮಾಸದಿಂದಲೇ ಕಾವ್ಯದ ಕಥೆ ಪ್ರಾರಂಭವಾಗುತ್ತದೆ. ಬಾರಮಾಸ ವಿರಹದ ಕಾವ್ಯ. ವಿರಹದ ಅತಿರೇಕ, ಅತಿತಾಪ ಮಾರ್ಗಶಿರದಲ್ಲಿಯೇ ಎಂದು ಕವಿ

ಭಾವಿಸಿದುದು ಸರಿಯಾದುದು. ಬೇರೆ ಕವಿಗಳು ಆಷಾಢಮಾಸದಿಂದ ಪ್ರಾರಂಭಿಸುತ್ತಾರೆ. ಅಲ್ಲಿ ವಿರಹದ ಉತ್ಕಟತೆಯನ್ನು ಹೇಳಲು ಅವಕಾಶವಿಲ್ಲ.

ಪತಿಯಗಲಿ ಬಳಲ್ದುಂ ಚಿಂತಿಸುತ್ತಿರ್ಪಪೆಣ್ಣಂ
ತತಿಗತಿರವ ಗೈದುಂ ಕಾಡುತಿರ್ಪವಿಜಾತೀ
ಖತಿಪಿಕಮಿವರಿಂಗಂ ಬುದ್ಧಿವೇಳ್ವಂದ ತಾನುಂ
ಅತಿ ಮೃದು ಹಿಮಮಾಸಂ ಮಾಗಿಯುಂ ಮಾರ್ಗಶಿರ್ಷಂ

ಹೇಮಂತ ಶಿಶಿರಗಳಲ್ಲಿ ಕೋಗಿಲೆ, ಗಿಳಿ, ಗೋರವಂಕ ಮೊದಲಾದ ಪಕ್ಷಿಗಳ ಕೂಗು ವಿರಹಿಗೆ ಕಾಡಿಕೆಯೆಂಬುದು ಎಷ್ಟು ಸಹಜ! ಅವುಗಳಿಗೆ ಬುದ್ಧಿ ಹೇಳುವಂತೆ ಹೇಮಂತ ಬಂದನಂತೆ. ಹೇಮಂತ ಮತ್ತು ಶಿಶಿರಗಳಲ್ಲಿ ಪಕ್ಷಿಗಳ ಬಾಯಿಗೆ ಬೀಗ ಬೀಳುತ್ತದೆ; ಅವುಗಳ ಕೂಗುನಿಂತು ಹೋಗುತ್ತದೆ.

ಹೇಮಂತ ಶಿಶಿರದ ವಿರುದ್ಧ ಚೈತ್ರ. ಇಲ್ಲಿ ಬಾಯಿ ಬಿಚ್ಚಿಕೊಂಡು ಪಕ್ಷಿಗಳು ವಿರಹವನ್ನೇನೂ ಕಡಿಮೆ ಮಾಡುವದಿಲ್ಲ. ಈ ವಿರಹ ಯಾವಾಗಲೂ ಇದ್ದುದ್ದೇ. ಅವೇ ಪಕ್ಷಿಗಳ ಬಾಯಬೀಗವನ್ನು ಚೈತ್ರ ಭಿದ್ರಿಸುತ್ತ ಬರುತ್ತಾನೆ. ಗಿಳಿ, ಕೋಗಿಲೆ ಮತ್ತು ಮದ - ಹಂಸಗಳು ತನ್ನಿಂದಲೇ ಓದಲು, ಹಾಡಲು, ನಡೆಯಲು ಕಲಿತು ತಮ್ಮ ಉಲುಹುಗಳಿಂದ ತನ್ನನ್ನೇ ಕಷ್ಟಕ್ಕೀಡುಮಾಡಿ ವಿರಹವನ್ನು ಹೆಚ್ಚಿಸುವುದಲ್ಲದೆ ಮೋರೆಯನ್ನು ನೆಲಕ್ಕೆ ಹಾಕುವಂತೆ ಮಾಡುತ್ತವೆ ಎಂದು ರಾಧೆ ಪ್ರಲಾಪಿಸುತ್ತಾಳೆ. ಈ ಪ್ರಲಾಪ ಎಷ್ಟು ಸಹಜವಾದುದೋ ಅಷ್ಟೇ ಸೊಗಸಾದುದು ವಸ್ತುವಿಗೆ ತಕ್ಕಂತೆ ಋತುವರ್ಣನೆ ಲಿಂಗಣ್ಣ ಮಾಡುತ್ತಾನೆಂದು ಹಿಂದೆ ಹೇಳಿದ ಮಾತು ಮಾರ್ಗಶಿರ ಮತ್ತು ಚೈತ್ರಗಳ ವರ್ಣನೆಯಿಂದ ಸಿದ್ಧವಾಗುವದಿಲ್ಲವೇ?

ಸಾಂಪ್ರದಾಯಿಕ ವರ್ಣನೆಯಾದರೂ ಶ್ರಾವಣದ ವರ್ಣನೆಯಲ್ಲಿ ಒಂದು ನಾವೀನ್ಯತೆಯನ್ನು ನಾವು ಕಾಣಬಹುದು.

ಜಲದದಲೆಗೆದರ್ದುಂ ಮಿಂಚಿನಿಂ ನೋಡಿ ನೃತ್ಯಂ
ಗಳನೆಸಗುವ ಮಯೂರರ್ಗಿಂದ್ರ ಗೋಪಾಸು ರತ್ನಂ
ಗಳಸುರಿವುತ ಸಿಟ್ಟಿಂ ರಾಜಹಂಸಕ್ಕುಪದ್ರಂ
ಗಳನೊಡರಿಚಿ ಬಂದಂ ರಾಜನೋಲ್ ಶ್ರಾವಣಾಖ್ಯಂ

ಶ್ರಾವಣದ ಇನ್ನೊಂದು ವೃತ್ತದಲ್ಲಿ ವಿರಹದ ತಾಪವನ್ನು ವರ್ಣಿಸಿ ಆ ಮಾಸದ ಪದದಲ್ಲಿ ಹಬ್ಬಹುಣ್ಣಿಮೆಗಳ ಪಟ್ಟಿಮಾಡುವ ಕವಿ ಒಂದು ಸಮಾಜದ, ಪರಿಸರದ ಮತ್ತು ಜನಜೀವನದ ಚಿತ್ರವನ್ನು ಕಡೆದು ನಿಲ್ಲಿಸುತ್ತಾನೆ. ಪ್ರತಿ ಮಾಸದ ಪದದಲ್ಲಿ ಇಂಥ ಸಾಮಾಜಿಕ ಪರಿಸರದ ನಿರ್ಮಾಣವನ್ನು ನಾವು ಕಾಣುತ್ತೇವೆ.

ಮಳೆ, ಚಳಿ, ಬಿಸಿಲು, ಬೇಗೆ - ಎಲ್ಲ ಕಾಲಗಳಲ್ಲಿ ವಿರಹದಲ್ಲಿ ಬೆಂದು ಬೆಂಡಾದ ವಿರಹಿಣಿಗೆ ನಲ್ಲನ ಕೂಡುವ ಕಾಲ ಒದಗಿಬರುತ್ತದೆ. ೧೧ ತಿಂಗಳು ಮುಗಿದು ೧೨ನೆಯ ತಿಂಗಳು ಕಾರ್ತೀಕ ಬಂತು. ಪ್ರಾರಂಭಕ್ಕೆ ಮಾರ್ಗಶಿರದಲ್ಲಿ ವಿರಹದ ಪರಿಸರ ನಿರ್ಮಿಸಿದ ಕವಿ ಮುಕ್ತಾಯದಲ್ಲಿ ಮಿಲನದ ಅತ್ಯಂತ ಸುಂದರ ಪರಿಸರ ನಿರ್ಮಿಸುತ್ತಾನೆ. ಕಾರ್ತೀಕ ಮಾಸ, ಶರದೃತು:

ಶರದ ಮುಸುಕು ಜಾರ್ದುಂ ಶೈಲವಕ್ಷೋಜದಿಂದಂ
ಅರಿಷಿಣದನುಲೇಪಂ ಪಣ್ದೆನೆ ಶಾಲಿಯಿಂದಂ
ನೆರೆಪಸುರುಡೆಯಿಂದಂ ಮೇಘಮಂ ನಾಣ್ಚಿಸುತ್ತಂ
ಧರೆಸತಿಯಿರೆ ಚೆಲ್ವಿಂ ಬಂದ ಕಾರ್ತೀಕ ಮಾಸಂ

ಮಂಜು ಮಾಯವಾಗುತ್ತದೆ. ಭತ್ತ ತೆನೆ ಬಿಟ್ಟು ಅರಿಷಿಣ ಬಣ್ಣಕ್ಕೆ ತಿರುಗುತ್ತದೆ. ಗಿಡಗಂಟೆಗಳ ಹಸಿರಿನ ವೈಭವ ಮತ್ತು ಇತರ ಬೆಳೆಗಳ ಮುರಿವ ಹಸಿರು ತಾನೇ ತಾನಾಗುತ್ತದೆ. ಶುಭ್ರವಾದ ಆಕಾಶ; ಬರಿಯ ನೀಲಿ. ಅದು ಕವಿಯ ದೃಷ್ಟಿಯಲ್ಲಿ ಅಂದವಿಲ್ಲದ್ದು. ಅರಿಷಿಣದನುಲೇಪದಿಂದ, ಪಸುರುಡೆಯಿಂದ, ಮಂಜು ಮುಸುಕು ಜಾರಿದ ಶೈಲವಕ್ಷೋಜದಿಂದ ಆಕಾಶವನ್ನು ನಾಚಿಸುತ್ತ ಚಲುವಿನ ಧರೆವೆಣ್ಣು ಮೈಮುರಿಯುವಾಗ ಮಿಲನದ ಸುಮುಹೂರ್ತ ಘಟಿಸುತ್ತದೆ. ರಾಧೆಯೊಂದೇ ಅಲ್ಲ, ವಸುಂಧರೆಯೂ ಹರ್ಷಗೊಂಡು ಕೃಷ್ಣನ ಬರುವಿಗಾಗಿ ಸಿಂಗಾರವಾಗಿ ಕಾದಿದ್ದಾಳೆ.

ರಾಧೆ ರಾತ್ರಿ ಕನಸು ಕಂಡಳು; ಕನಸಿನಲ್ಲಿ ಕಂಡದ್ದು ದಿವ್ಯಾಶ್ವರತ್ನಂಗಳು. ಕನಸು ನನಸಾಗುವ ಸಂಕೇತಗಳು. ಬೆಳಿಗ್ಗೆ ಅಂಗಳದಲ್ಲಿ ಕಾಗೆ ಕೂಗಿತು. ಇಂದು ಖಂಡಿತ ಪ್ರಿಯ ಬರುವನು; ವಿರಹಿಣಿಗೆ ಎಲ್ಲಿಲ್ಲದ ಸಂತಸ. ಒಣಗಿದ ಮೈ ಅರಳಿದೆ; ಹೋದ ಶಕ್ತಿ ನೂರ್ಮಡಿಸಿದೆ. "ಶ್ರೀ ಕಂದರ್ಪನ ಬಾಣಮಲ್ಲಿಗೆಗಳಂ

ನಾ ಮೆಟ್ಟುವೆಂ ಕಾಲಲಿ ಸಖೀ! ಶೋಕವು ಪಲ್ಲವವಾಗುವದು. ಕೃಷ್ಣ ಬಂದೇ ಬರುತ್ತಾನೆ'' ಎನ್ನುತ್ತಾಳೆ ವಿರಹಿಣಿ.

ದಿವ್ಯಾಶ್ವರತ್ನಂಗಳು ಒಂದು ಕಡೆ ಕನಸಿನ ಶುಭ ಸೂಚನೆಯಾದರೆ ಇನ್ನೊಂದು ಕಡೆ ಕಲ್ಕಿಯ ಅವತಾರದ ಸಂಕೇತವಾಗುತ್ತವೆ. ''ಶ್ರೀಕಂದರ್ಪನ ಬಾಣಮಲ್ಲಿಗೆಗಳಂ ನಾಮೆಟ್ಟುವೆಂ ಕಾಲಲಿ!'' ಎಂಬ ಮಾತು ಒರಟೆನಿಸಿದರೂ ದುಃಖಿ ವಿರಹಿಣಿಗೆ ಅದು ಸಹಜವೇ. ಹಾಗೆ ನೋಡಿದರೆ ಕಂದರ್ಪನನ್ನು ಮೆಟ್ಟಿದವರು ಯಾರೂ ಇಲ್ಲ. ಆದರೆ ವಿರಹವನ್ನು ಹೆಚ್ಚಿಸಿ ಕಾಡಿದ ಅದೇ ಕಂದರ್ಪ ಇಂದು ಅವಳ ಕೈವಶ.

ಸೂಫಿಗಳು, ಸಂತರು, ಶರಣರು ಆಚರಿಸುವ ಭಕ್ತಿ ಅದು ಮಧುರಾ ಭಕ್ತಿ. ಶರಣರು ಸತಿಪತಿಭಾವದ ಆಚರಣೆಯಲ್ಲಿ ತಾವೇ ಸತಿಯೆಂದು ಭಾವಿಸಿದರೆ ಸೂಫಿ ಸಂತರು ದೇವರು ಸತಿಯೆಂದು ಭಾವಿಸುತ್ತಾರೆ. ಅವರ ಪ್ರೇಮ ಕಾಮವಾಸನೆಯಿಂದ ದೂರಾದುದು. ಅವರು ತಮ್ಮ ಇನಿಯವನ್ನು (ಇನಿಯಳನ್ನು) ಕೂಡುವ, ಒಂದಾಗುವ ವರ್ಣನೆಗೆ ಸಾಮಾನ್ಯ ಲೈಂಗಿಕ ಶಬ್ಧಗಳನ್ನೇ ಬಳಸುತ್ತಾರೆ. ''ಅಪ್ಪಿದರೆ ಅಸ್ತಿಗಳು ನುಗ್ಗುನುರಿಯಾಗಬೇಕು'' ಎನ್ನುತ್ತಾಳೆ ಅಕ್ಕ. ರಾಧಾ ಕೃಷ್ಣರ ಮಿಲನ ಈ ಕಾವ್ಯದಲ್ಲಿ ಮನೋಹರವಾಗಿ ವರ್ಣಿತವಾಗಿದೆ.

ರಾಧೆ ಕೃಷ್ಣನನ್ನು ಕೂಡಿದ, ಅವನಿಂದ ಪಡೆದ ಸುಖದ ಸೀಮೆ ಅರುಹುತ್ತಾಳೆ. ''ಸುರತದಿ ಸುಖಭರಿತದಿ ದಣಿಸಿದ ಕೃಪಾಶರಧಿ''.

ರಾಧಾಕೃಷ್ಣರ ಪ್ರೇಮ ಭಾರತೀಯ ಸಾಂಸ್ಕೃತಿಕ ಬದುಕಿನಲ್ಲಿ ಒಂದು ಉದಾತ್ತ ಪ್ರೇಮದ ಸಂಕೇತವೆಂದು ಭಾವಿಸಲಾಗಿದೆ. ಅದರಂತೆ ಅದೊಂದು ದೈವಿಕ ಪ್ರೇಮವೆಂದೂ ನಂಬಲಾಗಿದೆ.

ಲಿಂಗವೊಡೆಯ ಜನರಾಡುವ ಮಾತುಗಳನ್ನು ಕೆಲವು ಕಡೆ ಬಳಸಿ ಅವುಗಳಲ್ಲಿ ವಿಶಿಷ್ಟ ಶಕ್ತಿ ತುಂಬಿದ್ದಾನೆ: ಎಲ್ಲೇ, ಬಾಯ್ಬಿಟ್ಟು, ದಾ, ಮೋರೆನೆಲಕ್ಕೆ ತೋರ್ಪ್ಪಂತಾಯ್ತು ಮುಂತಾಗಿ.

ಎಲ್ಲಿ ಬಿಡು ಎಲ್ಲಸುಳ್ಳು ಎಲ್ಲಿದೆ ಎಂಬರ್ಥ ಕೊಡುತ್ತದೆ 'ಎಲ್ಲೇ' ಎಂಬ ಶಬ್ದ. ದಾ ಎಂಬುದು ಈಗ ನಾವು ಹತ್ತೆಂಟು ರೀತಿಯಿಂದ ಎಂದು ಬಳಸುವಂತೆ ಆ ಕಾಲಕ್ಕೆ ಬಳಸುತ್ತಿರಬೇಕು."ದಾ ದೈನ್ಯೋಕ್ತಿಯೊಳಾನು ಬೇಡಿಕೊಳ್ಳುವೆ" ದಹ ದಶ ಎಂದರೆ ಹತ್ತು, ಅದೇ ಇಲ್ಲಿ ದಾ ಆಗಿದೆ.

ಬಾರಮಾಸ ಕಾವ್ಯಗಳು ಹಾಡುಗಬ್ಬಗಳು. ಉರ್ದು ಬಾರಮಾಸ ಉಜಲತ್‌ದಲ್ಲಿ ತನ್ನ ವಿರಹ ವ್ಯಥೆಯನ್ನು ಅಡಾಣ ರಾಗದಲ್ಲಿ ಹಾಡುತ್ತೇನೆ ಎಂದು ಒಬ್ಬ ವಿರಹಿಣಿ ಹೇಳುತ್ತಾಳೆ. ಇಂದಿಗೂ ಉತ್ತರದಲ್ಲಿ ಹಾಡುವ ರೂಢಿಯಿದೆ. ನಯನಾದೇವಿಯಂಥ ಸಂಗೀತ ವಿದುಷಿಯರು ಬಾರಮಾಸ ಹಾಡಿದ್ದಾರೆ. ಅದರ ಕ್ಯಾಸೆಟ್‌ಗಳು ದೊರಕುತ್ತವೆ. ಪಂ. ಬಸವರಾಜ ಶಾಸ್ತ್ರಿಗಳು ಲಿಂಗಣ್ಣನ ಕಾವ್ಯವನ್ನು ಹಿಂದೆ ಹಾಡುತ್ತಿದ್ದ ಧಾಟಿಯಲ್ಲಿ ಹಾಡಿತೋರಿಸುತ್ತಾರೆ. ಆ ಧಾಟಿಯನ್ನು ಒಗ್ಗಿಸಿಕೊಂಡು ಶ್ರೀ ರಾಮಸ್ವಾಮಿ ನುಲಿ ಈ ಕಾವ್ಯವನ್ನು ಹಾಡುತ್ತಾರೆ.

"ಎಂತು ಸ್ವೈರಿಸಲಾಪೆನು ಸಖೀ ಏಣಾಂಬಕೀ ಎತ್ತ ಪೋದನೋಕಾಣೆ -----" ಈ ಪ್ರಲಾಪದ ನುಡಿಗಳು ಪ್ರತಿಪದದ ಕೊನೆಗೆ ಆವರ್ತನಗೊಳ್ಳುತ್ತವೆ.

ಕೆಲವು ವೃತ್ತಗಳು ಸಂದಿಗ್ಧವಾಗಿವೆ; ಕೆಲವು ಛಂದಸ್ಸಿಗೆ ಹೋಲುವದಿಲ್ಲ; ಶಿಥಿಲತೆ ಕಂಡುಬರುತ್ತದೆ. ವೃತ್ತಗಳಲ್ಲಿ ಇರುವ ಸಂದಿಗ್ಧತೆ ಮತ್ತು ಶಿಥಿಲತೆ ಪದಗಳಲ್ಲಿಲ್ಲ. ಪದಗಳು ಶುದ್ಧವಾಗಿವೆ, ಸರಾಗವಾಗಿವೆ. ಈ ಪದಗಳು ನಮ್ಮ ಅನೇಕ ಕವಿಗಳ ಪದಗಳಂತೆ, ಅನುಭಾವಿಗಳ ಹಾಡುಗಬ್ಬಗಳಂತೆ ಯಾವ ಛಂದಸ್ಸಿಗೂ ಹೊಂದಿಕೊಳ್ಳುವುದಿಲ್ಲ. ಈ ಕವಿಗಳ ಪದಗಳ ಛಂದಸ್ಸನ್ನು ಕುರಿತು ಅಧ್ಯಯನವಾಗುವುದು ಅವಶ್ಯವಾಗಿದೆ.

ಅನುಭಾವಿಗಳ ರಚನೆಗಳಂತೆ ಲಿಂಗಣ್ಣವೊಡೆಯನ ಪದಗಳಿವೆ. ಇವು ಜಾನಪದಕ್ಕೆ ಸೇರುವುದಿಲ್ಲ. ಶಿಷ್ಟಕಾವ್ಯಗಳೆಂದು ಇವುಗಳನ್ನು ಗುರುತಿಸುವುದೇ ಸರಿ. ಲಿಂಗವೊಡೆಯ ಇಂಥ ಪದಗಳನ್ನು ಬರೆದಿರಬೇಕು; ಬರೆದಿರಲು ಸಾಧ್ಯವಿದೆ. ಬಾರಮಾಸದ ಪದಗಳಲ್ಲಿ ಕಂಡುಬರುವ ಸೊಗಸು, ಸರಸ, ಸೌಂದರ್ಯ ಬದುಕಿನ ಸಜೀವ ಅರ್ಥವಂತಿಕೆ ಆತನ ವೃತ್ತಗಳಲ್ಲಿಲ್ಲ ಎಂದರೆ ಆ ವೃತ್ತಗಳು ಕಡಿಮೆಯೆಂದಲ್ಲ. ಅವು ತಮ್ಮಷ್ಟಕ್ಕೆ ಕಾವ್ಯ ಸೌಂದರ್ಯದಿಂದ ಕೂಡಿವೆ. ಕವಿಯ

ಜಾಯಮಾನ ಪದಗಳ ಕಡೆಗೆ ಹೆಚ್ಚು ವಾಲುತ್ತದೆ. ಹೀಗೆಂದ ಮಾತ್ರಕ್ಕೆ ಆತನ ಪ್ರೌಢಿಮೆ ಪಾಂಡಿತ್ಯವನ್ನು ಕಡೆಗೆಣಿಸಿದಂತಾಗುವುದಿಲ್ಲ. ಲಿಂಗವೊಡೆಯ ಬರೆದ 'ಗಣೇಶನ ಸ್ತುತಿ' ಎಂಬ ಹಾಡುಗಬ್ಬ ದೊರಕಿದೆ. ಇದರಲ್ಲಿ ೨೧ ನುಡಿಗಳಿವೆ.(ಅನುಬಂಧ ನೋಡಿರಿ)

ಬಾರಮಾಸದ ಪದಗಳು ಮತ್ತು ಈ ಗಣೇಶ ಸ್ತುತಿಯ ಪದ ಇವೆರಡರಲ್ಲಿ ರಚನೆ, ಭಾವ ಮುಂತಾದವುಗಳ ದೃಷ್ಟಿಯಿಂದ ಸಾಮ್ಯ ಕಂಡು ಬರುತ್ತದೆ. ಆದರೆ ಈ ಪದದ ಕೊನೆಗೆ'ಮಾರಟೇಶ' ಎಂಬ ಅಂಕಿತವಿರುವದರಿಂದ ನಾವು ತುಸುಗೊಂದಲದಲ್ಲಿ ಬೀಳುತ್ತೇವೆ. ಯಾಕೆಂದರೆ ಬಾರಮಾಸದ ಕೊನೆಯ ಪದದಲ್ಲಿ 'ವೆಂಕಟೇಶ' ಎಂಬ ಅಂಕಿತವಿದೆ. ಮಾರಟೇಶ್ವರ ಗುಡಿಯ ಉತ್ತರ ದ್ವಾರದ ತುಸು ಮುಂದೆ ಕಾಳಿಯ ಗುಡಿಯಿದೆ. ಇದರ ಹಿಂದೆ ಒಂದು ದೊಡ್ಡ ಗುಂಡಿದೆ. ಅದರಲ್ಲಿ ಗಣಪತಿಯನ್ನು ಕೊರೆದಿದ್ದಾರೆ. ಗುಂಡಿನ ಗಣಪತಿಯೆಂದು ಇದರ ಹೆಸರು.

## ಅಂಕಿತ

ವಂಶಪಾರಂಪರ್ಯದಿಂದ ಮಾರಟೇಶ್ವರನ ಪೂಜಾರಿಗಳಾದ ಧೂಪದ ಮನೆತನದವರು ಮಾರಟೇಶ್ವರನಷ್ಟೇ ಗುಂಡಿನ ಗಣಪತಿಗೆ ಮಹತ್ವವನ್ನು ಕೊಡುತ್ತ ಬಂದಿದ್ದಾರೆ. ಜನರೂ ಈ ಮಾತಿಗೆ ಅಪವಾದವಲ್ಲ. ಲಿಂಗವೊಡೆಯನ ಮೊಮ್ಮಗ ಲಿಂಗಣ್ಣ ಕವಿ ತನ್ನ ವರರಮ್ಯ ರತ್ನಾಕರ ಕಾವ್ಯದಲ್ಲಿ ಗುಂಡಿನ ಗಣಪತಿಯ ಸ್ತೋತ್ರವನ್ನು ಮಾಡಿದ್ದಾನೆ.

ತನುಜರಕ್ಕರು ತಾಯಿಗಗ್ಗಳ
ವೆನಿಪುದಂ ಜಗಕರುಪವೋಲ
ಯ್ಯನ ಕವಾಟವ ಕಾವುತಾಂಬೆಯ ಬೆನ್ನಬಿಡೆನೆಂದು
ತನಯ ರಾಟವ ತೋರಿದೋಲ್ಪಗ
ಜನನಿ ಕಾಳಿಯ ಬೆನ್ನಿಲೂಪ್ಪುವ
ಘನಮಹಿಮ ಗುಂಡಿನ ಗಣೇಶ್ವರನೀವುದಭಿಮತವ

ವರರಮ್ಯ ರತ್ನಾಕರ ಕಾವ್ಯ ಬರೆದ ಲಿಂಗಣ್ಣ ತನ್ನ ಕಾವ್ಯದಲ್ಲಿ ಗುಂಡಿನ ಗಣಪತಿಯ ಸ್ತೋತ್ರ ಮಾಡಿದಂತೆ ಈತನ ತಾತನಾದ ಲಿಂಗಣ್ಣನೂ ಯಾಕೆ ಮಾಡಿರಬಾರದು? ಮೇಲೆ ಹೇಳಿದಂತೆ ಆ ಗಣಪತಿಯ ಸ್ತೋತ್ರದ ಅಂಕಿತ

ಮಾರಟೇಶ ಎಂದಿರುವುದರಿಂದ ಅದರ ಕರ್ತೃ ಲಿಂಗಣ್ಣಾಚಾರ್ಯನೇ ಎಂಬುದು ಸಂಶಯಕ್ಕೆಡೆಗೊಡುತ್ತದೆ. ಬಾರಮಾಸ ಕಾವ್ಯದ ಲಿಂಗಣ್ಣ ಕವಿಯ ಅಂಕಿತ ಏನು? - ಎನ್ನುವದರ ಚರ್ಚೆಗೆ. ಅವಕಾಶ. ಆವಶ್ಯಕತೆ ಇರದಿದ್ದರೂ ಯಾರೋ ಮಾಡಿದ ತಪ್ಪನ್ನು ಸರಿಪಡಿಸಲು ನಾವಿಲ್ಲಿ ತುಸು ಚರ್ಚೆಗೆ ನಿಲ್ಲಬೇಕಾಗುತ್ತದೆ.

ನಮಗೆ ದೊರಕಿದ ಬಾರಮಾಸದ ನಾಲ್ಕು ಪ್ರತಿಗಳಲ್ಲಿ ಒಂದು ಪಂ. ಬಸವರಾಜ ಶಾಸ್ತ್ರಿಗಳಿಂದ ದೊರಕಿದುದು (ಈ ಪ್ರತಿಯ ಬಗ್ಗೆ ಮುಂದೆ ವಿವರವಾಗಿ ಹೇಳಿದೆ). ಈ ಪ್ರತಿ ಎಕ್ಸರ್‌ಸೈಜ್ ೯೬ ಪುಟದ ಕಾಪಿ. ಈ ಪ್ರತಿಯಲ್ಲಿ ಮಾತ್ರ ಕೊನೆಯ ಪದದಲ್ಲಿ "ಮಾರಟೇಶನು ತಾನು"[೧] 'ಮಾರಟೇಶನ ಸಖನು' ಎಂದು ಎರಡು ಹೆಸರು ಬರೆಯಲಾಗಿದೆ. ಉಳಿದ ಪ್ರತಿಗಳಲ್ಲಿ "ವೆಂಕಟೇಶನು ತಾನು" ಎಂದಿದೆ. ಅಂಕಿತದ ವಿಚಾರ ಬಂದಾಗ ಈ ಕೊನೆಯ ಪದದಲ್ಲಿ ವಿಷ್ಣುವಿನ ವರ್ಣನೆ ಮತ್ತು ಸ್ತೋತ್ರವಿರುವುದರಿಂದ "ಮಾರಟೇಶನು ತಾನು" ಎಂಬುದು. ಸರಿಹೋಗುವುದಿಲ್ಲ. ಯಾಕೆಂದರೆ ಮುಂದೆ "ಸ್ಥಿರವಾದ ಸೌಭಾಗ್ಯವೀವನು ದೇವದೇವನು ಸಿರಿದೇವಿಯಾಧವನು" ಎಂದು ಇರುವುದು. ಮಾರಟೇಶನು ಸಿರಿದೇವಿಯಾಧವನು ಆಗಲು ಸಾಧ್ಯವಿಲ್ಲ. "ಮಾರಟೇಶನ ಸಖನು" ಎಂದರೂ ತಪ್ಪಾಗುತ್ತದೆ. ಶಿವನ ಸಖ ಕುಬೇರನೇ ಹೊರತು ವಿಷ್ಣುವಲ್ಲ. ಇತರ ಪ್ರತಿಗಳಲ್ಲಿರುವ "ವೆಂಕಟೇಶನು ತಾನು" ಎಂಬುದೇ ಸರಿಹೋಗುತ್ತದೆ. ಆದುದರಿಂದ 'ವೆಂಕಟೇಶ' ಎಂಬುದೇ ಲಿಂಗಣ್ಣನ ಅಂಕಿತ. ಪ್ರತಿಮಾಡುವವರು ತಿದ್ದಿರಬೇಕೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಆದರೆ ಅವರು ಮಾಡಿದ ತಪ್ಪು ಅವರಿಗೇ ಅರ್ಥವಾಗಿಲ್ಲ.

ಒಬ್ಬ ಕವಿಗೆ ಎರಡೆರಡು ಅಂಕಿತಗಳಿರುವುದು ಸಾಧ್ಯವಿದೆ. ಇಂಥ ಉದಾಹರಣೆಗಳು ನಮಗೆ ದೊರಕುತ್ತವೆ. ಸಿದ್ಧರಾಮ ತನ್ನ ವಚನಗಳಿಗೆ 'ಕಪಿಲ ಸಿದ್ಧಮಲ್ಲಿಕಾರ್ಜುನ' ಎಂಬ ಅಂಕಿತವಿಟ್ಟುಕೊಂಡಿದ್ದಾನೆ. ಇದೇ ಸಿದ್ಧರಾಮ ತನ್ನ

---

೧. ಪದದಲ್ಲಿ ಮಾರಟೇಶನು ತಾನು ಎಂದಿದೆ. ಎಡಗಡೆಯ ಖಾಲಿ ಜಾಗೆಯಲ್ಲಿ 'ವೆಂಕಟೇಶನು ತಾನು' ಎಂಬುದರ ಕೆಳಗೆ "ಮಾರಟೇಶನ ಸಖನು" ಎಂದು ಬರೆಯಲಾಗಿದೆ. ಎರಡು ಹೆಸರುಗಳ ಮಾತ್ರೆಗಳು ಅಷ್ಟೇ ಆಗುವವೆಂದು ಖಚಿತಪಡಿಸಿಕೊಳ್ಳಲು ಒಂದರಕೆಳಗೊಂದು ಬರೆದಂತೆ ಕಾಣುತ್ತದೆ.

ಸ್ವರವಚನಗಳಿಗೆ 'ಯೋಗಿನಾಥ' ಎಂಬ ಅಂಕಿತವಿಟ್ಟುಕೊಂಡಿದ್ದಾನೆ. ಉರ್ದುಮಹಾಕವಿ ಗಾಲಿಬ್‌ನಿಗೆ ಎರಡು ಅಂಕಿತಗಳಿವೆ: ಒಂದು ಅಸದ್. ಇನ್ನೊಂದು ಗಾಲಿಬ್. ಕುಲಿಕುತುಬ್‌ಷಾಹ ಎಂಬ ಕವಿಗೆ ೧೯ ಅಂಕಿತಗಳಿವೆ. ಇಂಥ ಒಂದು ಸಂಪ್ರದಾಯ ಕಾವ್ಯಲೋಕದಲ್ಲಿ ಬೆಳೆದುಬಂದಿದೆ. ಲಿಂಗವೊಡೆಯ ಬಾರ ಮಾಸಕ್ಕೊಂದು ಮತ್ತು ಬಿಡಿಪದಗಳಿಗೊಂದು - ಹೀಗೆ ಬೇರೆ ಬೇರೆ ಅಂಕಿತಗಳನ್ನು ಇಟ್ಟುಕೊಂಡಿರಲು ಸಾಧ್ಯತೆಯಿದೆ. ಬಾರಮಾಸದ ಕೊನೆಯ ಪದದಲ್ಲಿ ತನ್ನ ಊರನ್ನು "ಧರೆವೆಣ್ಣು ಶಿರದ ಮಾಣಿಕದೊಲು ರಾಜಿಪ ಮೇಲು ರಾಯಚೂರು ಸೀಮೆಯೊಳು ಮೆರೆವ ಕಲ್ಲೂರುಗ್ರಾಮ -------" ಎಂದು ವರ್ಣಿಸುತ್ತಾನೆ. ತನ್ನ ಗುಂಡಿನ ಗಣಪತಿ ಸ್ತೋತ್ರದ ಕೊನೆಯ ನುಡಿಯಲ್ಲಿ "ಧಾರುಣೆಗಧಿಕ ಶೃಂಗಾರವೆನಿಪ ಕಲ್ಲೂರು ಲಿಂಗನ ಪಾಲಿಸುವ ----" ಎಂದು ವರ್ಣಿಸುತ್ತಾನೆ. ಇವೆರಡು ವರ್ಣನೆಗಳಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಆ ಕಾಲದಲ್ಲಿ ಅಗ್ರಹಾರವಾಗಿದ್ದ ಕಲ್ಲೂರು ಸುಂದರವಾಗಿತ್ತು. ವಿಶಾಲವಾದ ಮತ್ತು ಸುಂದರ ಕಟ್ಟಡಗಳ ಆರುಭಾವಿಗಳು ಇನ್ನೂ ಇವೆ. ಊರಲ್ಲಿ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ಮಾರಟೇಶ್ವರ ದೇವಾಲಯಕ್ಕೇ ಹೆಚ್ಚುಮಹತ್ವ ಹಿಂದಿನಿಂದಲೂ ಬಂದಿದೆ; ಅನೇಕ ಶಾಸನಗಳಲ್ಲಿ ಉಕ್ತವಾಗಿದೆ. ಊರಲ್ಲಿ ವೆಂಕಟೇಶ್ವರ ಎಂಬ ಒಂದು ಗುಡಿಯೂ ಇದೆ. ಅದೀಗ ಜೀರ್ಣವಾಗಿದೆ. ಶಾಸನಗಳಲ್ಲಿ ಉಕ್ತವಾಗಿಲ್ಲ. ಅದಕ್ಕೀಗ ವೆಂಕಟರಮಣ ಗುಡಿ ಎಂದು ಕರೆಯುತ್ತಾರೆ. ಕವಿಯ ಕಾವ್ಯ ವೈದಿಕ ಸಂಪ್ರದಾಯಗಳಿಗೆ ಸಂಬಂಧಪಟ್ಟುದರಿಂದ ಈ ಕಾವ್ಯಕ್ಕೆ ವೆಂಕಟೇಶ ಎಂಬ ಅಂಕಿತವನ್ನು ಇಟ್ಟುಕೊಂಡಿರುವುದು ಸಹಜವೆನಿಸುತ್ತದೆ. ಬಾರಮಾಸದ ಜ್ಯೇಷ್ಠಮಾಸದಲ್ಲಿ ಮತ್ತು ಶ್ರಾವಣ ಮಾಸದಲ್ಲಿ ಕವಿ ಶಿವನನ್ನು ಭಕ್ತಿ ಪೂರ್ವಕವಾಗಿ ವರ್ಣಿಸಿದ್ದಾನೆ. ಆತನಿಗೆ ಮಾರಟೇಶ ಮತ್ತು ವೆಂಕಟೇಶ ಇವರಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಅದರಂತೆ ವೈದಿಕ ಮತ್ತು ವೀರಶೈವ ಧರ್ಮಗಳಲ್ಲಿಯೂ ಆತನಿಗೆ ಪ್ರೀತಿಯಿದೆ. ವೀರಶೈವರೂ ಪೂಜೆಗೆ ತುಳಸಿಯನ್ನು ಬಳಸುವದಿಲ್ಲ. ಗಣಪತಿ ಸ್ತೋತ್ರದಲ್ಲಿ ಗಣಪತಿ ಪೂಜೆಗೆ ತುಳಿಸಿಯನ್ನೂ ಕರಿಕೆ. ದವನ. ಮಾವಿನ ದಳ. ನೇರಿಲು ಮತ್ತು ಮರುಗಗಳೊಂದಿಗೆ

ತಂದೊಟ್ಟುವೆನೆನ್ನುತ್ತಾನೆ. ಬಿಲ್ವ, ಮಾವು, ನೇರಿಲು, ತುಳಸಿ - ಸಂದರ್ಭಾನುಸಾರ ಬಾರಮಾಸದ ಕಾವ್ಯದಲ್ಲಿ ಇವುಗಳ ಬಳಕೆಯಿದೆ. ಇವು ಗಣಪತಿ ಸ್ತೋತ್ರ ಮತ್ತು ಬಾರಮಾಸದ ಕವಿ ಒಬ್ಬನೇ ಅನ್ನಲಿಕ್ಕೆ ಅಂತರಂಗಿಕ ಪ್ರಮಾಣಗಳಾಗಿವೆ. ವೆಂಕಟೇಶ ಮತ್ತು ಮಾರಟೇಶ ಇವೆರಡೂ ಲಿಂಗಣ್ಣನ ಅಂಕಿತಗಳಾಗಿವೆ.

ಧರ್ಮ ಧರ್ಮಗಳಲ್ಲಿರುವ ಸ್ನೇಹ, ಪ್ರೀತಿ, ಸೌಹಾರ್ದತೆ ಮತ್ತು ಸಹಿಷ್ಣುತೆಗಳ ಕುರಿತು ಮತ್ತೊಮ್ಮೆ ಸ್ವಲ್ಪ ಮಟ್ಟಿಗೆ ಇಲ್ಲಿ ಚರ್ಚಿಸುವುದು ಅವಶ್ಯವಿದೆ. ಭಾರತೀಯರಲ್ಲಿ ಈ ಗುಣಗಳು ಮೊದಲಿನಿಂದಲೂ ಇವೆ; ಕರ್ನಾಟಕವಂತೂ ಈ ಗುಣಗಳಿಗೆ ಕಳಸವಿಟ್ಟಂತಿದೆ. ಬಾರಮಾಸ ಕಾವ್ಯಗಳನ್ನು ಎಲ್ಲ ಮತಗಳವರೂ, ಎಲ್ಲ ಧರ್ಮಗಳವರೂ ಬರೆದಿದ್ದಾರೆ. ಮುಸಲ್ಮಾನ ಕವಿಗಳಂತೂ ಅತ್ಯಂತ ಶ್ರೇಷ್ಠ ದರ್ಜೆಯ ಬಾರಮಾಸ ಕಾವ್ಯಗಳನ್ನು ಸೃಷ್ಟಿಸಿದ್ದಾರೆ. ಇವರ ಬಾರಮಾಸ ಕಾವ್ಯಗಳ ವಸ್ತು ವೈದಿಕ ಮತ್ತು ಹಿಂದು ಧರ್ಮವೇ ಆಗಿದೆ. ಇದು ಹಿಂದು ಮುಸಲ್ಮಾನರಲ್ಲಿ ಬೆಸೆದ ಸ್ನೇಹ ಸೌಹಾರ್ದತೆಯ ಕುರುಹು. ಕಲುಷಿತಗೊಂಡ ಇಂದಿನ ಸಂದರ್ಭದಲ್ಲಿ ಕೋಮುಸೌಹಾರ್ದತೆಯೆಂದು ಒಂದೇ ಸಮನೇ ಕೂಗಾಡುತ್ತಿರುವವರು ತುಸು ಹಿಂದೆ ತಿರುಗಿ ಆ ಕಾಲದ ಮಧುರ ಬಾಂಧವ್ಯವನ್ನು ತಿಳಿದು ಕೊಳ್ಳಲು ಯಾಕೆ ಪ್ರಯತ್ನಿಸಬಾರದು? ಅಂದು ಕೋಮು ಸೌಹಾರ್ದತೆ ಸಹಜವಾಗಿತ್ತು. ಇಂದು ವಾತಾವರಣವನ್ನು ಕಲಕಿ, ಹದಗೆಡಿಸಿ ಪರಸ್ಪರ ವೈರವನ್ನು ಹಬ್ಬಿಸಿ ಆಮೇಲೆ ತಾವೇ ಕೋಮು ಸೌಹಾರ್ದತೆ ಎಂದು ಕೂಗಿಕೊಳ್ಳುತ್ತಿರುವವರ ಧ್ವನಿ ನಕಲಿಯದಾಗಿದೆ. ಹೃದಯದಿಂದ ಪರಸ್ಪರರನ್ನು ಒಂದುಗೂಡಿಸುವ ಕೃತಿಗಳಿಂದ ಜೀವನವನ್ನು ಸಂಪತ್ತು ವೈಭವಗಳಿಂದ ಸಿಂಗರಿಸಿದ ನಮ್ಮ ಪೂರ್ವಜರ ಅನುಕರಣೆಯೊಂದೇ ಇಂದಿನ ಹದಗೆಟ್ಟ ಪರಿಸ್ಥಿತಿಗೆ ಸಂಜೀವಿನಿಯಾಗಬಲ್ಲುದು. ಈ ದೃಷ್ಟಿಯಿಂದ ಲಿಂಗವೊಡೆಯನ ಬಾರಮಾಸ ಅತ್ಯಂತ ಮಹತ್ವದ್ದೆನಿಸುತ್ತದೆ. ಹೈದರಾಬಾದ್ ಕರ್ನಾಟಕ ಅನೂ ರಾಯಚೂರು ಜಿಲ್ಲೆಯ ಜನಜೀವನದಲ್ಲಿ ಕೋಮು ಸೌಹಾರ್ದತೆ ತಾನೇ ತಾನಾಗಿತ್ತು. ಬ್ರಾಹ್ಮಣರು ಇಲ್ಲದ ಹಳ್ಳಿಗಳಲ್ಲಿ ಲಿಂಗಾಯತರೆ ಭಾಗವತದ ಪ್ರವಚನ ಮಾಡುತ್ತಿದ್ದುದು ತಿಳಿದುಬರುತ್ತದೆ. ರಾಜಶೇಖರವಿಳಾಸ, ಚೆನ್ನಬಸವಪುರಾಣಗಳಷ್ಟೇ ಲಕ್ಷ್ಮೀಶನ ಜೈಮಿನೀ ಭಾರತವನ್ನೂ ನಮ್ಮವರು ಎಂದರೆ ಎಲ್ಲ ಸಮಾಜದವರೂ ಪ್ರೀತಿಯಿಂದ ಓದುತ್ತಿದ್ದರು. ಮಠಾಧೀಶರ

ಪ್ರವಚನಗಳಲ್ಲಿ ಭಗವದ್ಗೀತೆಯ ಶ್ಲೋಕಗಳೂ ಉದಾಹರಿಸಲ್ಪಡುತ್ತಿದ್ದವು. ಈ ಭಾಗದಲ್ಲಿ ಎಲ್ಲ ಮತದವರು ಒತ್ತಟ್ಟಿಗೆ ಸೇರಿ ಕಾವ್ಯಗಳ ಅಧ್ಯಯನ ಮಾಡುತ್ತಿದ್ದರು. ನನ್ನ ಚಿಕ್ಕಂದಿನಲ್ಲಿ ರಾಜಶೇಖರ ವಿಳಾಸವನ್ನು ಓದಿ ಸೊಗಸಾಗಿ ಅರ್ಥಹೇಳುವ ಮುಸಲ್ಮಾನ ವಿದ್ವಾಂಸರನ್ನು ಕಂಡಿದ್ದೇನೆ. ಗಣೇಕಲ್ ಸಂಗವಿಭುಕವಿಯ 'ಕುಮಾರ ವಿಜಯ' ಚಂಪೂ ಕಾವ್ಯದ ಅರ್ಥವನ್ನು ಸ್ವಾರಸ್ಯವಾಗಿ ಕುರುಡಿಗ್ರಾಮದ ಕೃಷ್ಣಾಚಾರ್ಯರು ಅಭಿಮಾನದಿಂದ ಹೇಳುತ್ತಿದ್ದರು. ಸಂಗವಿಭುವಿನ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಲು ನನಗೆ ಪ್ರೇರಣೆಯಿತ್ತವರು ನನ್ನ ಗುರುಗಳಾದ ವಾಜೇಂದ್ರರಾವ ಮಾಸ್ತರರು. (ಪ್ರೀತಿಯಿಂದ ಇವರನ್ನು ವಾಜಪ್ಪ ಮಾಸ್ತರರೆಂದೇ ಕರೆಯುತ್ತಿದ್ದರು). ಅವರಿಗೆ ಸಂಗವಿಭು ಎಂದರೆ ಬಹಳ ಪ್ರೀತಿ ಮತ್ತು ಅಭಿಮಾನ.

ರಾಯಚೂರು ಜಿಲ್ಲೆಯ ಅನುಭಾವಿ ಕವಿಗಳು ಆಚರಿಸಿ ತೋರಿದ ಧರ್ಮಸಹಿಷ್ಣುತೆ ಎಲ್ಲರಿಗೂ ಯಾವ ಕಾಲಕ್ಕೂ ಅನುಕರಣೀಯವೇ. ಮಾನ್ವಿ ತಾಲೂಕಿನ ಅರವಲಿ ಗ್ರಾಮದ 'ಬಿಜಲಿವಸ್ತಾದಿ'ಗೆ ಅಲ್ಲಮ ಪ್ರಭು ಬೇರೆಯಲ್ಲ, ಹಸೇನ್ ಹುಸೇನ್‌ರು ಬೇರೆಯಲ್ಲ. ಹಸೇನ ಹುಸೇನರು ಕೈಲಾಸಕ್ಕೆ ಹೋದರೆಂದು ಈ ಕವಿ ಹೇಳುತ್ತಾನೆ. "ಜ್ಞಾನದಿಂದ ಶಿವಧ್ಯಾನವ ಮಾಡಣ್ಣಾ" ಎಂಬ ಈತನ ಪದ ಹಾಡದ ಭಜನಿ ಮೇಳಗಳೇ ಇಲ್ಲ. ಸೂಗೂರೇಶ್ವರನನ್ನು ಕುರಿತು ತಾನು ರಚಿಸಿದ ಪದಗಳನ್ನು ಹಾಡುತ್ತ ಶಿಷ್ಯರೊಡಗೂಡಿ ಪ್ರತಿವರ್ಷ ಸೂಗೂರೇಶ್ವರ ಜಾತ್ರೆಗೆ ದೇವಸೂಗೂರಿಗೆ ಹೋಗುತ್ತಿದ್ದ ದೇವದುರ್ಗ ತಾಲೂಕಿನ ಗೊಬ್ಬೂರ ಅನುಭಾವಿ ಕವಿ ಹಂಪಣ್ಣ ಬುಟ್ಟಿಯಲ್ಲಿ ಬೆಳ್ಳುಳ್ಳಿಹೊತ್ತು ಊರೂರು ತಿರುಗಿ ಮಾರುತ್ತಿದ್ದ. ಸುಲ್ತಾನಪುರದ ಅಕರಾಮಸಾಹೇಬ ದರ್ಗಾದ ಮುಲ್ಲಾ "ಏ ಹಂಪಣ್ಣಾ, ಬರೇ ನಿಮ್ಮ ದೇವರ ಪದಗಳನ್ನೇ ಹಾಡುತ್ತೀ; ನಮ್ಮ ದೇವರ ಬಗ್ಗೆ ಬರೆದು ಹಾಡಲ್ಲಾ" ಅಂದನಂತೆ. ಆಶುಕವಿ ಹಂಪಣ್ಣ ಅಲ್ಲಿಯೇ. "ದೇವರು ಆನೆ ಅಕರಾಮ ಸಾಹೇಬ ದೊಡ್ಡ ಪೀರಾ। ಭಾವದಲಿ ಭಜಿಸೊ ನೀ ಪೂರಾ।" ಎಂದು ಪ್ರಾರಂಭಿಸಿ ಐದುನುಡಿ ಪದ ರಚಿಸಿ ಹಾಡಿ. ಕೊನೆಗೆ "ಅಕರಾಮ ಸಾಹೇಬ ಮತ್ತು ಮಣಿಪುರವಾಸ ವೃಷಭ" ಬೇರಲ್ಲ, ಅವರಿಬ್ಬರೂ ಒಂದೇ ಎಂದು ಸಾರಿದ. ದೇವದುರ್ಗ ತಾಲೂಕಿನ

ಲಿಂಗದಹಳ್ಳಿಯಲ್ಲಿ ರಾಮದಾಸರ ಸಮಾಧಿಯಿದೆ. ಈತ ಮುಸಲ್ಮಾನ; ಶಿಕ್ಷಕನಾಗಿದ್ದ. ರಾಮದಾಸನಾಗಿ ಐನೂರಕ್ಕೂ ಮಿಕ್ಕಿ ದೇವರನಾಮ. ಹಾಡುಗಳನ್ನು ಬರೆದಿದ್ದಾನೆ. ಇಂತಹ ಸಮೃದ್ಧವಾದ ಸೌಹಾರ್ದಮಯ ವಾತಾವರಣದಲ್ಲಿ ಬೆಳೆದು ಬಾಳಿದ ಲಿಂಗಣ್ಣ ಕವಿ ರಾಘವೇಂದ್ರ ಸ್ವಾಮಿಗಳಿಗೆ ಕಾಣಿಕೆಯಾಗಿ ಅರ್ಪಿಸಿದ ತನ್ನ ಕಾವ್ಯದಲ್ಲಿ '**ವೆಂಕಟೇಶ**'ನೆಂದು ಅಂಕಿತವಿಟ್ಟುಕೊಂಡುದು ಆಶ್ಚರ್ಯಕರವಾದುದೂ ಅಲ್ಲ ಸಂಶಯಾಸ್ಪದವಾದುದೂ ಅಲ್ಲ. ಇಲ್ಲಿ ಇನ್ನೊಂದು ಮಾತು ಮಹತ್ವದ್ದಿದೆ. ಲಿಂಗಾಯತರು ವೆಂಕಣ್ಣ, ವೆಂಕಟೇಶ, ತಿಮ್ಮಣ್ಣ, ಹನುಮಪ್ಪ, ಹನುಮಗೌಡ, ನರಸಪ್ಪ, ಮೋಹನರಾವ್, ಗೋಪಾಲರಾವ್ - ಮುಂತಾದ ಹೆಸರುಗಳನ್ನು ಇಟ್ಟು ಕೊಳ್ಳುತ್ತಾರೆ. ವೆಂಕಣ್ಣ ಹನುಮಣ್ಣ ಇವು ಬಹಳ ಬಳಕೆಯಲ್ಲಿವೆ. ಕೆಳದಿಯ ವೆಂಕಟಪ್ಪ ನಾಯಕ ಪ್ರಸಿದ್ಧ ಅರಸನೆಂದು ಯಾರಿಗೆ ಗೊತ್ತಿಲ್ಲ? ಲಿಂಗಾಯತರಲ್ಲಿ ಒಂದು ರಡ್ಡಿ ಪಂಗಡದ ಮನೆದೇವರು ತಿರುಪತಿಯ ವೆಂಕಟೇಶ್ವರ. ಈ ನಿಟ್ಟಿನಿಂದ ನೋಡಿದರೂ ಲಿಂಗಣ್ಣನ ವೆಂಕಟೇಶ ಅಂಕಿತ ಸಹಜವೆನಿಸುತ್ತದೆ.

ನಮ್ಮ ಚಿಕ್ಕಂದಿನಲ್ಲಿ ಯಾರೂ ಕುಲಭೇದ ಮಾಡುತ್ತಿರಲಿಲ್ಲ. ಎಲ್ಲರಿಗೂ ನಾವು ದೊಡ್ಡಪ್ಪ, ಚಿಕ್ಕಪ್ಪ, ಮಾಮ ಎಂದೇ ಕರೆಯುತ್ತಿದ್ದೆವು. ದೊಡ್ಡ ಜಾತಿ ಸಣ್ಣಜಾತಿ ಎಂಬುದೇ ಅಲ್ಲಿರಲಿಲ್ಲ. ನಬೀಬಿ, ಹುಸೇನ್‌ಬಿ, ಮಹಬೂಬ್‌ಜಾನ್ - ಇವರೆಲ್ಲ ನಬೆಮ್ಮ ಅತ್ತೆ, ಹುಸೇನಮ್ಮ ಕಕ್ಕಿ, ಮಾಬಮ್ಮ ಅಕ್ಕರಾಗಿದ್ದರು. ಕಾಶೀಮ್‌ಸಾಬ್ ಕಾಶೀಮಪ್ಪ, ಖಾಜಾಸಾಬ್ ಖಾಜಣ್ಣರಾಗಿದ್ದರು. ಹಿಂದು ಮುಸಲ್ಮಮಾನರು ಕೂಡಿಯೇ ಕಾರಹುಣ್ಣಿಮೆ, ಅಲಾಯಿ ಹಬ್ಬ, ದಸರೆ ಆಚರಿಸುತ್ತಿದ್ದರು. ಅಂತಹ ಕಾಲ ಎಪ್ಪತ್ತು ವರ್ಷದ ನಾನು ಮತ್ತೆ ಕಾಣುವೆನೇ? ಅಂತಹ ಜಾತಿರಹಿತ ಶುದ್ಧಪ್ರೇಮ, ಸ್ನೇಹ ಮತ್ತೆ ಮರುಕಳಿಸಿ ಬರುವವೇ?

**ಸಂಪಾದಕ**



ಮಾರಟೇಶ್ವರ ಗುಡಿ, ಕಲ್ಲೂರು

# ಬಾರಮಾಸ

ಎಲೆ ಪ್ರಿಯಳೆ ನಿನ್ನ ರೂಪೀಗ ತೋರೆ
ಬಲಾರಣ್ಯ[೧]ಕಂ[೧] ಪೋಪೆನಲ್ಲುಂಟು ಕಾರ್ಯಂ
ಜಲೇಜಾಕ್ಷಿ ನಿನ್ನಧರಕ್ಷೀರವಿತ್ತು
ಸಲೆ ಬೀಳ್ಕೊಡೆ ಮನ್ಮನೋ ಪದ್ಮ [೨]ಹಂಸೆ[೨] ೧

[೩]ತಳರ್ಬೇಡ[೩]ವೈ ದೂರದ ಪಯಣಮಾಗಿ
ಬಳಿರ್ಕೆಂದು ಬರ್ಪೆ [೪]ಪ್ರಮಾಣೊಂದು[೪] [೫]ಪೇಳ್ವೆ[೫]
[೬]ತಳಿರ್ಬಾಣನುಂ ಸೈತಿರಂ ಪೋರ್ವನೆನ್ನಾ[೬]
ಖಳಾರಾತಿ ಗೋಪಾಲಕೃಷ್ಣ [೭]ದಯಾಳು[೭] ೨

---

೧-೧ ಕ (ಬ). ಕಾಂ (ರಾ) ೨-೨ ಹಂಸಿ (ಗ). ಹಂಸ (ರಾ) ೩-೩ ತೆರಳಬೇಡ (ಬ). ತಳಿರ್‌ಬೇಡ (ಗ. ರಾ) ೪-೪ ಪ್ರಮಾಣವೊಂದು (ಬ) ೫-೫ ಪೇಳು (ರಾ) ೬-೬X (ಬ. ರಾ) ೭-೭ X (ಬ)

**ಶ್ಲೋಕ** : (ಮಾಲಿನೀ ವೃತ್ತ)
ಪತಿಯುಗಲಿ ಬಳಲ್ದಾಂ ಚಿಂತಿಸುತ್ತಿರ್ಪ ಪೆಣ್ಣಂ
ತತಿಗತಿರವಗ್ಯೆದುಂ [೧]ಕಾಡುತಿರ್ಪಾ[೧] ವಿಜಾತೀ
ಖತಿಚಿರಮಿಪರಿಂ [೩][ಗಂ][೩] ಬುದ್ಧಿಪೇಳ್ವಂದ [೪]ತಾನುಂ[೪]
ಅತಿಮೃದು ಹಿಮ [೫]ಮಾಸಂ[೫] ಮಾಗಿಯುಂ ಮಾರ್ಗಶಿರ್ಷಂ ೪

**ವೃತ್ತ** : ಶಾರ್ದೂಲ ವಿಕ್ರೀಡಿತ
ಏನ್ನಂ [೬]ಕುಸ್ತುರಿ[೬] ಸುತ್ತ ಭಾಷೆಗರೆದುಂ ದಿವ್ಯಾನ್ನಮಂ ಭುಂಜಿಸೀ
ಏನ್ನಿಂ ಗಂಧವ ಲೇಪವಾಂತು ಮುದದಿಂ ತಾಂಬೂಲಮಂ ಚರ್ಪಿಸೀ
ಚೆನ್ನೇ ದ್ವಾರಕೆಗೀಗ ಪೋಗಿಬಹೆನೆಂದುಂ ಪೋದ[೭]ನತ್ತಂ[೭] ಹರೀ
ಇನ್ನೆಂತಿರ್ದಪೆ ಬಂತು ಮಾರ್ಗಶಿರಮಾಸಂ ಕಾಂತನಿಲ್ಲೋರ್ವಳೇ ೫

**ಪದ** :
ಈ ಮಾರ್ಗಶಿರಮಾಸ ಬರಲಾಗಿ ಹರುಷಿತರಾಗಿ ಸತಿಪುರುಷರೊಂದಾಗಿ
ಪ್ರೇಮದಿ ಸಂಪ ಷಷ್ಠಿಯ ಪೂಜೆ ದೀಪಗಳೋಜೆ ಮಿಗೆ ಪ್ರಜ್ವಲಿಸುತಿರೆ
ಹೇಮಾಂಬರ ಕೇಶವನಿಲ್ಲ ಪ್ರಾಣದ ನಲ್ಲ ತಾನೇಕಗಲಿದನೋ
ಸೋಮವಿಲ್ಲದ ನಭವಾದೆನು ದೇಹವಿದ್ದೇನು [೮]ನೋಡಿನ್ನೇನ ಮಾಡುವೆನು[೮] ೬

[೯]ಎಂತು ಸೈರಿಸಲಾಪೆನು ಸಖೀ ಪೀತಾಂಬರಿ ಎತ್ತಪೋದನೊ ಕಾಣೆ
ಕಾಂತ ದ್ವಾರಕೆಗೆಂದು ಪೇಳಿದ ಮೋಹದಾಳಿದ ಮುಂದೆ ಬಾರನೋದನರಿಯೆ
ಎಂತು ಸೈರಿಸಲಾಪೆನು.....[೯]

---

೧-೧ ಕಾಡುತಿರ್ಪರ್ (ಬ, ಗ). ಕಾಡುತಿರ್ಪರ್ (ರಾ) ೩-೩ ದಂ (ಶಾ. ಬ. ಗ. ರಾ) ೪-೪ ಶೈದಂ (ಗ). ವೈದಂ (ರಾ) ೫-೫ X (ಬ) ೬-೬ ಕಸ್ತುರಿ (ಬ) ೭-೭ ನತ್ತು (ಗ) ೮-೮ ನೋಡು ಏನು ಮಾಡುವೆನು (ಬ) ೯-೯ X (ಬ, ರಾ)

**ಶ್ಲೋಕ** : (ಮಾಲಿನೀ ವೃತ್ತ)
ಸರಿಯದೆ ಹರಮ್ಯೆಯುಂ ಬೆಸಮ್ಮುರಾಸ್ಯಂಗ[1]ಛತ್ರಂ[1]
ತರುಣಿಯರಿಗೆ ಶೀತಕ್ಕಂಜಿ ಮಿಕ್ಕಿರ ಪಾಡೇನ್
ಬರುತಿದೆ ಹಿಮ[3]ಪೀಗಲ್[3] ಸ್ತ್ರೀಯರಂ ಪೊರ್ದಿರೆಂದುಂ
ಧರೆಜನಕೊರೆವಂತ್ಯೆತಂದುದಾ ಪುಷ್ಯಮಾಸಂ ೬

**ವೃತ್ತ** : ಮತ್ತೇಭ ವಿಕ್ರೀಡಿತ
ಬಳಗುಂ ಭೇಷಜ [4]ಸ್ತ್ರೀಯರೋಜೆಮೆನುತಂ[4] ಸಮ್ಯೋಗಿಗಳ್ ಪೇಳ್ವರು
ಅನುಸಾರತ್ವಕುಲಿಕ್ಕೆ ಕಾಂತರೊಳು ತಾಂ [5][ತಳ್ಪೌಷಧಂ][5] ಸಿಕ್ಕುಯುಂ
ಎಲೆ ಭೃಂಗಾಳಿಕೆ ಕೇಳು ಕೃಷ್ಣ ತಡೆದಂ ನಾನೂಕಲಂ[6]ತ್ರೈ[ಕಿ]ಲಾ[6]
[7]ಬಳಿಯೊಂದಲ್ಲದರೋಳಿನಂಗ ನೆಲೆಯೇಂ ಅತ್ಯುಷ್ಣಮೋ ಪ್ರೀಯಳೇ[7] ೭

**ಪದ**:
ಬಂದುದೀಗಳೆ ಪುಷ್ಯಮಾಸವು ಪರಿತೋಷವು ಪತಿಯಿದ್ದ ಹೆಂಗಳಿಗೆ
ಚೆಂದದಿ ತಿಲ ಸಂಕ್ರಾಂತಿಯು ಹಬ್ಬದರ್ತಿಯು ನವಭಾಂಡಬಾಗಿನವು
ಗಂಧಕುಂಕುಮಗಳನೀವುತ ತಾವು ಮೀವುತ ಸರ್ವರಾಲಿಯುಗಳಲಿ
ಇಂದೆನ್ನ ಮನೆಯೊಳೆನ್ನಯ ಪ್ರಾಣನಾರಾಯಣ ಇಲ್ಲದಾದನು ಪ್ರವೀಣಾ ೮

ಎಂತು ಸೈರಿಸಲಾಪೆನು ಸಖೀ ಪಣಾಂಬಕೀ..........

---

೧-೧ ಛತ್ರ (ಅ) ೩-೩ ಪೀಗಳ್ (ಬ) ೪-೪ ಸ್ತ್ರೀಯಸ್ಸಿರ ಅರೋಜಮೆಮನುತಂ (ಗ) ೫-೫ ತಳ್ಪ್ರಮೌಷಧ (ಅ). ತಳ್ಪೌಷಧೀ (ಬ). ತಳ್ಪಮೌಷಧಿ (ಗ). ತರ್ಳಪಧ (ಡ) ೬-೬ ಕಿ (ಅ. ಬ. ಗ. ಡ) ೭-೭ ಬಳಿಯೊಂದಲ್ಲದರೋಳನಂಗ ನಲಿವೆ ಅತ್ಯುಷ್ಣವ ಪ್ರಿಯಸ್ಸಳೆ (ಡ)

**ಶ್ಲೋಕ** : (ಮಾಲಿನೀ ವೃತ್ತ)

ಕಮಲಕುಮುದ ಬಾಣಂ ಶೀತದಿಂ ಕುಂದಲೇನು
ಪ್ರಮದೆಯರ ಕಟಾಕ್ಷಬಾಣದಿಂ ಕೊಲ್ವಮಾರಂ
ರಮಣಿಯ ಪಿಕಭ್ರೂಣಂ ಗೂಡಿ ಗೂಡೋಳು ಕಾಕಂ
ಕ್ರಮಿಪದಿನವೆನುತ್ತಂ ಪೇಳ್ವವೋಲ್ ಬಂದ ಮಾಘಂ ೯

**ವೃತ್ತ** : ಮತ್ತೇಭ ವಿಕ್ರೀಡಿತ

ಯುವತೀ ಕೇಳು ವಿದೇಹ ದೇಹ ಸುಡುವಂ ತಾನಾದುದಂ ತೋರ್ಪವೋಲ್
ಜವಳೀ ಪೂಸರದಿಂದಲೆಚ್ಚು ಸುಡುವಂ ತಾಪಕ್ಕಹೋರಾತ್ರಿಯಂ
ಎವೆಗಳ್ ಮುಚ್ಚದೆ ಕೃಷ್ಣ ತನ್ನ ಪಥಮಂ ನೋಳ್ಪಂತೆ ತಾಮಾಡಿದಂ
ಅವನೇ ಬಂದಡೆ ಕಣ್ಣು ಮುಚ್ಚದವೊಲುಂ ಮಾಳ್ಪಂ [೧]ಸಖೀರತ್ನವೇ[೧] ೧೦

**ಪದ**:

ಮಾಘಮಾಸದಿ ಮಾವು ನೇರಿಲು ಪತ್ರಿಯುದುರಲು ಫಲವಾಗಿ ಬೋರೆಗಳು
ಆಗಮಯುತ ಜಪತಪದಲ್ಲಿ ತರ್ಪಣಗಳಲಿ [೨]ರಥ[೨]ಸಪ್ತಮಿಯಲಿ
ವೇಗದಿ ಕೂಷ್ಮಾಂಡ ದಾನವು ನಿತ್ಯ ಸ್ನಾನವು ದೇವತಾರ್ಚನೆ ಘನವು
ಈಗ ಮಾಧವ ತಡೆದುದರಿಂದ ಪಕ್ಕವನೊಂದ ಪಕ್ಷಿಯಾಯಿತೆನ್ನಂದ ೧೧

ಎಂತು ಸೈರಿಸಲಾಪೆನು ಸಖೀ ಏಣಾಂಬಕೀ............

---

೧-೧ ಕೃಷ್ಣಂಬರ (ಶಾ. ಗ). ನಾಥಂಬರ (ಬ) ೨-೨ ರಸ (ಶಾ. ಗ)

**ಶ್ಲೋಕ** : (ಮಾಲಿನೀ ವೃತ್ತ)
[೧][ಕಳೆಗಳಳಿದ][೧] ರಶ್ಮೀ [೨][ಯಾಂತ][೨] ಏ[೩]ನ್ನಿಂದ[೩] ಸೂರ್ಯಂ
ಚಳಿ ಬಿಸಿಲುಗಳಿಂದಂ ಕುಂದು ಹೆಚ್ಚಾಗದಿರ್ಕುಂ
ಖಿಲಹಿಮನಗದತ್ತಂ ಸಾರ್ದ ಮುಂದಂಜಬೇಡಾ
ಬಲು ನಡೆತರುತಿ[೪][ರ್ಪಂ][೪] ಶೈಶಿರತ್ವಂತು ಮಾಸಂ ೧೨

**ವೃತ್ತ** : ಶಾರ್ದೂಲ ವಿಕ್ರೀಡಿತ
ಈ ಬೆಳ್ದಿಂಗಳು ಶೈತ್ಯಮೆಂದು ನುಡಿವರ್ ವಿದ್ವಾಂಸರುಂ ಕಾಣದೆ
[೫][ಅಬ್ಜಾಗ್ನೈರ್ದಹನಾರ್ಕ][೫] ರೋಚಿಯಹುದಂ ತಂಗಾಳಿಯೇ ಭಾವಿಸಲ್
ಈ ಬೆಂದಂಗನ ದಾಳಿಯಪ್ಪುದೆನಗಂ ಕಾಲೇಳದಂತಾದುದು
ತಾಬಂದಾಗಲೆ ಏಳದಂತೆ ತನಗಂ ಗೈವೇ ಸಖೀ ಕೃಷ್ಣನಂ ೧೩

**ಪದ**:
ಬಂದುದು ಫಾಲ್ಗುಣಮಾಸವು ಸುವಿಲಾಸವು ಪುಷ್ಪಫಲಂಗಳುಲ್ಲಾಸವು
ಅಂದದಿ ಕಾಮದಹನಂಗಳು ಪರಿಮಳಗಳು ಕುಂಕುಮದ ರಸಗಳು
ಮುಂದುವರಿದು ಜೀರ್ಕೊಳವಿಯಲಿ ರಸಗಳ ಚೆಲ್ಲಿ [೬]ಆಡುತಿರ್ಪರಲ್ಲಲ್ಲಿ[೬]
ಇಂದು ಗೋವಿಂದನ ಪೂಜೆಯು ಪುಷ್ಪರಾಜಿಯು ಅರ್ಚಿಸುವೆನಕ್ಕಯ್ಯ ೧೪

ಎಂತು ಸೈರಿಸಲಾಪೆನು ಸಖೀ ಏಣಾಂಬಕೀ.......

---

೧-೧ ಕಳೆಯಳಿದ (ಶಾ. ಬ. ಗ. ರಾ) ೨-೨ ಯಂತ್ರೆ (ಶಾ). ಯಂತೆ (ಬ). ನಾಂತೆ (ರಾ). ಯಾಂತ್ರೆ (ಗ) ೩-೩ ನಿನ್ನೀಂದಲ್ಲಿ (ರಾ) ೪-೪ ರ್ಪಂ (ಶಾ. ಬ. ಗ. ರಾ) ೫-೫ ಅಬ್ಜಂಗಧ್ರುವಿನಂಗ (ಶಾ). ಅಭ್ಯಂಗದ್ರುವಿಣಾಂಗ (ಬ). ಅಬೆಂಗದ್ರುವಿನಂಗ (ಗ), ಅಬ್ಯಾಂದಂಗದ್ರುವಿನಂಗ (ರಾ) ೬-೬ ಆಡುತಿಹರೆಲ್ಲರಲ್ಲಿ (ಶಾ)

**ಶ್ಲೋಕ** : (ಮಾಲಿನೀ ವೃತ್ತ)

ಎಳಬಿಕಗಳ ಬಾಯಾಬೀಗಮಂ [೧]ಥಿದ್ರಿಸುತ್ತಂ[೧]
ಅಳಿಗಳದಳಕೊಲ್ದುಂ ಪದ್ಮಮಂ ಸೂರೆಗೊಟ್ಟುಂ
ಬಲಿಯದ ತಳಿರಿಂದಂ ತೋರಣಂಗಟ್ಟಿಸುತ್ತಂ
ಬಳಲಿಸಿ [೨]ಮೊದಲಾಳ್ವಾ ಮಾಗಿಯಂ ಬಂದ ಚೈತ್ರಂ[೨] ೧೫

**ವೃತ್ತ** : ಶಾರ್ದೂಲ ವಿಕ್ರೀಡಿತ

ಎನ್ನಿಂದೋದಲು ಕಲ್ತ ಕನ್ನಡ ವಿಹಂಗಂ ಪಾಡಕಲ್ತಾ ಪಿಕಂ
ಮುನ್ನಂ ಪೆಣ್ಣೆಯನಿಕ್ಕಕಲ್ತ ಮದಹಂಸಂಗಳ್ ರವಂಗೈಯಲೂ
ಇನ್ನೇನಾಡಲಿ ಮೋರೆಯುಂ ನೆಲಕೆ ತೋರ್ಪಂತಾಯಿತು ತನ್ನಿಂದಲೀ
ತನ್ನಾ ಮೋರೆ ನೆಲಕ್ಕೆ [೩]ತಗ್ಗಿಸುವವೋಲ್[೩] ನಾಮಾಳ್ಪೆ ಕೃಷ್ಣಂಬರೇ ೧೬

**ಪದ**:

ವರಚೈತ್ರಬರೆ ಮೋಹಿಗಳ್ಕೂಡಿ ವನಗಳ ನೋಡಿ ಜಲಕ್ರೀಡೆಯನಾಡಿ
ತರುಣ ಪಲ್ಲವ ಮಂಟಪಮಾಡಿ ಪುಷ್ಪಗಳ ಸೂಡಿ [೪]ನೆರೆವರು ಸತಿಗೂಡಿ[೪]
ಅರವಂಟಿಗೆ ಅನ್ನಛತ್ರಂಗಳು ಇಟ್ಟು ಪೆಣ್ಗಳು ಸವಿಗೋಲಿ ದಾನಂಗಳು
ವಿರಚಿಪರು ಎನಗಿಲ್ಲದಾದನು ವಿಷ್ಣುವೆ ತಾನು ಪೇಳೆಂದು ಬಾಹದನು ೧೭

ಎಂತು ಸೈರಿಸಲಾಪೆ ಸಖೀ ಏಣಾಂಬರೀ............

---

೧-೧ ಬಂಧಿಸುತ್ತ (ರಾ) ೨-೨ ಮೊದಲಾಳ್ವಂಗಂ ಬುದ್ಧಿಪೇಳ್ವಂದ ಚೈತ್ರಂ (ಬ). ಮೊದಲಾಳ್ವಾ ಮಾಗಿಯಂ ಬಂದಂತೆ ಚೈತ್ರಮಾಸಂ (ಗ) ೩-೩ ತಗ್ಗಿಪಂತೆ (ರಾ) ೪-೪ X (ಗ)

**ಶ್ಲೋಕ** : (ಮಾಲಿನೀ ವೃತ್ತ)

ಗಿಳಿಝಳ ಹಯಮೇರ್ದುಂ [೧]ಮಂದತೀವ್ರ ಹರಿಯಂ[೧]
ಬಲುಸಖಿರೊಡಗೊಂಡುಂ ದಂಪತೀವೃಕ್ಷಗಳ್ಗೆ
ಫಲವು ವಿರಹಿಗಳ್ಗೇ [೨]ವೇಣು[೨]ವೃಕ್ಷಕ್ಕುಪದ್ರಂ
ಗಳನೊಡರಿಚಿ ಬಂದಮಾರ್ಗಾರ ವೈಶಾಖಿರೊರ್ಮೆ ೧೮

**ವೃತ್ತ** : ಶಾರ್ದೂಲ ವಿಕ್ರೀಡಿತ

ಎಲ್ಲೇ ಕಬ್ಬಿನಬಿಲ್ಲು ಸುಳ್ಳು ಕುಸುಮಂ ಬಾಣಂಗಳೇ ಭಾಷ್ಯಳಂ
ಬೆಲ್ಲಂ ಗಂಧವು ತೋರವೇಕೆ ಕೆಳದೀ ಕಲ್ಲಾಗಿ ಮುಳ್ಳಾಗಿವೆ
ಎಲ್ಲಗಿರ್ಗೀಗಳೆ [೩]ಬಿಚ್ಚಿಬಾಯಿ[೩] ತೋರುವ್ರೋಲಾಯ್ತೆನ್ನ ಸೌಭಾಗ್ಯವು
ಪಲ್ಲಂದೋರುವ್ರೊಲಾನು ಮಾಡದಿಹನೇ ಪುಲ್ಲಾಂಬಕಂ ಬಂದಡೆ ೧೯

**ಪದ**:

ಬರಲು ವೈಶಾಖದ ಒಸಗೆಯು ಅಕ್ಷಯತದಿಗೆಯು ಪಿತೃಗಳ ಮುಖ್ಯವಸೆಯು
ಕರಗ ಬಿಜ್ಜಣ ಕಂಸಪಾತ್ರೆಯು ಚೊಕ್ಕ ಬುತ್ತಿಯು [೪]ಗುಡ[೪]ಯುಕ್ತ ಹೋಳಿಗೆಯು
ವರಮಾಸಮೂರ್ತಿಯ ಪ್ರಾರ್ಥಿಸಿಯೆಲ್ಲವರ್ಪಿಸಿ ಪಾರ್ವರಿಗಿತ್ತು ದಣಿಸಿ
ಮೆರೆವರು ಸರ್ವರಿಂತನುದಿನ ಮಧುಸೂದನ[೫]ನಿತ್ತನೆನಗನುಮಾನ[೫] ೨೦

ಎಂತು ಸೈರಿಸಲಾಪೆ ಸಖೀ ಪಣಾಂಬಕೀ.........

---

೧-೧ ಬಂದುತೀರ್ದುಂ ಹರೀಂದು (ಬ) ೨-೨ ಮೇಣು (ಬ) ೩-೩ ಬಾಯಬಿಚ್ಚಿ (ಬ) ೪-೪ ಗೂಢ (ಶಾ, ಗ, ರಾ) ೫-೫ ಬಾರದಾದನುಘನ (ಬ)

**ಶ್ಲೋಕ** : (ಮಾಲಿನೀ ವೃತ್ತ)

ಅಡವಿಯ ನಗ¹ಜಾತ¹ಕಗ್ನಿಯಂ ಪುಟ್ಟಿಸುತ್ತಂ
ನಡೆವ ಪಥಿಕಜಾಲರ್ಗಾಸರಂ ಕೊಟ್ಟು ಮೇಣುಂ
ಜಡಭರಿತ ತಟಾಕಂ ಗಂಗೆಯುರ್ಗಾಗಿ ಬಂದಂ
ಕೊಡರುಹನೊಲು ವಾಯುಂಗೂಡಿ ಗ್ರೀಷ್ಮಾದಿ ಮಾಸಂ ೨೧

**ವೃತ್ತ** : ಶಾರ್ದೂಲ ವಿಕ್ರೀಡಿತ

ಆ ದಿಕ್ಕಿಂ ಬಹುಗಾಳಿಯುಂ ವಿಹಗಮುಂ ಎಲ್ಲಿಂದಲೈತಂದಿರೀ
ಹಾದೀಬೀದಿಗಳಲ್ಲಿಯಾದರಿರನೇ ಮನ್ಮಾಥನಂ ಕಂಡಿರೇ
ದಾದ್ಯೆನ್ನ್ಯೋಕ್ತಿಯೊಳಾನು ಬೇಡಿಕೊಳುವೋಲಾಯ್ತೆನ್ನ²ಸೌಭಾಗ್ಯವು²
ಗಾದೇ ಇಲ್ಲವೆ ಬೇಡಿಕೊಂಬ ತೆರನಂ ನಾ ಮಾಳ್ಪೆ ಬಂದಾಕ್ಷಣಂ ೨೨

**ಪದ** :

ಈಗ ಬಂದುದು ಜೇಷ್ಠಮಾಸವು ಶ್ರಮನಾಶವು ಭೋಗಿಗಳಿಗೆ ಸಂತಸವು
ಶ್ರೀಗಂಧಲೇಪನ ಪರಿಮಳಯುಕ್ತ ಸೀತಳಜಲಪಾನವು ಬಹಳ
ಶ್ರೀಗೌರಿಕಾಂತನ ವಾಹನಪೂಜೆಯು ಘನಪೇಳಲೇನು ಸುಮ್ಮಾನೆ
ಪೋಗಿ ತ್ರಿವಿಕ್ರಮ ತಡೆದನು ರಾಯಸವನು ಅಟ್ಟಬಾರದೆ ತಾನು ೨೩

ಎಂತು ಸೈರಿಸಲಾಪೆನು ಸಖೀ ಏಣಾಂಬಕೀ..........

---

೧-೧ ಜಾಲಿ (ರಾ) ೨-೨ ಸತ್ಪೈರ್ಮೆಯು (ಗ. ರಾ)

**ಶ್ಲೋಕ** : (ಮಾಲಿನೀ ವೃತ್ತ)

ಕಡುದಶಶತಜ್ವಾಲಾ ಕೈಗಳಿಂ ಚಂಡರೋಚಿ
ಪೊಡವಿಯ ಸುಡುತಿರ್ಪಂ ಪ್ರಾಣಿಗಳ್ ಬೇವರೆಂದು
ಘುಡುಘುಡಿಸುತ ಮೇಘಧ್ವಾನದಿಂ ಗರ್ಜಿಸುತ್ತಂ
ಬಡನದಿಗಳು [೧][ಬರ್ಪೋಲ್][೧] ಬಂದನಾಷಾಢಮಾಸಂ ೨೪

**ವೃತ್ತ** : ಮತ್ತೇಭ ವಿಕ್ರೀಡಿತ

ಪುಸಿಯಲ್ಲಂಗನೆ ಕೇಳು ಭೂಮಿಗಗನಂ ತಾನೆತ್ತನಾನೆತ್ತಲುಂ
ದೆಸೆಯೆಂಟೆತ್ತಲು ರಾತ್ರಿವಾಸರಗಳುಂ ಎಂತಿರ್ಪುವೆಂದೆಂಬುದಂ
ಸಸಿನೇ ಸಿಕ್ಕಿದೆ ಕ್ಲೇಶವೆಂಬ ಕಡಲೊಳ್ ಪೋಗಿರ್ಪ ನಾಥಂಬರೆ
ಬಿಸಿದೊಟ್ಟಿಲ್ ಪುಗುವಂತೆ ಮಾಡದಿಹನೇ [೨]ಪೆಣ್ಗಳ್[೨] ಶಿರೋರನ್ನವೇ ೨೫

**ಪದ**:

ಅತಿಗ್ರೀಷ್ಮದಾಷಾಢ ಜವದೊಳು ಮೈದೋರಲು ಪ್ರಥಮೈಕಾದಶಿಯೊಳು
ತಿಥಿಪುಣ್ಯ ವಾಮನ ಮೂರ್ತಿಯ [೩]ಪೂಜೆಪೂರ್ತಿಯ[೩] ಮುಖ್ಯವಾಸರವೆನುತ
ಕ್ಷಿತಿಸುರರುಪವಾಸ ಜಾಗ್ರವತಾವೆಸಗುವ ಒಂದು ರಾತ್ರಿ ದಿವಸವ
ಮಿತಿಗೈವರುಂಟೆ ನಾಮಾಡುವ ನಿರಾಹಾರವ ಜಾಗ್ರಗೈವೆ ನಿನ್ನಿರವ ೨೬

ಎಂತು ಸೈರಿಸಲಾಪೆ ಸಖೀ ಏಣಾಂಬಕೀ............

---

೧-೧ ಬಲವೋಲ್ (ಶಾ). ಬರ್ಪವೋಲ್ (ಬ). ಬಲ್ಪವೋಲ್ (ಗ). ಬಲ್ಪವೋಲ್ (ರಾ) ೨-೨ ಪೆಣ್ (ಶಾ) ೩-೩ ಸಿತಕೀರ್ತಿಯು (ಶಾ)

**ಶ್ಲೋಕ** : (ಮಾಲಿನೀ ವೃತ್ತ)

[೧]ಜಲದದಲೆಗೆದರ್ದುಂ[೧] ಮಿಂಚಿನಿಂ ನೋಡಿ ನೃತ್ಯಂ
ಗಳನೆಸ[೨]ಗುವ[೨] ಮಯೂರರ್ಗಿಂದ್ರ ಗೋಪಾಸುರತ್ನಂ
ಗಳ [೩]ಸುರಿವುತ ಸಿಟ್ಟಿಂ ರಾಜಹಂಸಕ್ಕುಪದ್ರಂ
ಗಳ[೩]ನೊಡರಿಚೆ ಬಂದಂ ರಾಜನೋಲ್ ಶ್ರಾವಣಾಖ್ಯಂ ೨೭

**ವೃತ್ತ** : ಮತ್ತೇಭ ವಿಕ್ರೀಡಿತ

ಎನಗೀರತ್ನ ಸುವರ್ಣಕಾಂತಿ ಗೃಹಮುಂ [೪]ಸೌ[೪]ವಾಸದಂತಿಲ್ಲವೋ
ಇನಿಭಕ್ಷ್ಯಂಗಳು ಭೋಜ್ಯಪಾಯಸಗಳುಂ ಮೃಷ್ಟಾನ್ನಮಾಗಿಲ್ಲವೋ
ವನದೊಳ್ ಸಂಚರಿಸುತ್ತ ಕಾಯಕಸುರಂ ಮೆಲ್ಪಂತೆ ತಾಮಾಡಿದಂ
ಇನಿತಾಯಾಸವನಿಕ್ಕಿ ಪೋದನ[೫]ಬಲೇ[೫] ಆತಂಗಿದೇ ಸಾಕ್ಷಿಯು ೨೮

**ಪದ**:

ಬಂದುದು ಶ್ರಾವಣಮಾಸವು ಪುಣ್ಯದಿವಸವು ನಾಗವೈರಿಪಂಚಮಿಯು
ಇಂದುವಾರದಲಭಿಷೇಕವು ಸರ್ವ ಸೌಖ್ಯವು ಶಂಕರಗೆ ಬಿಲ್ಪದಳವು
ತಂದು ಸಮರ್ಪಿಸಿ ನಮಿಸುತ ಮುಂದೆ ಭಜಿಸುತ ಗೋಕುಲಾಷ್ಟಮಿಯಲ್ಲಿ
ಚಂದದಿ ಶ್ರೀಧರಮೂರ್ತಿಯು ಪೂಜೆಪೂರ್ತಿಯು ಕಾಣಲಿಲ್ಲವೀಪರಿಯು ೨೯

ಎಂತು ಸೈರಿಸಲಾಪೆ ಸಖೀ ಏಣಾಂಬಕೀ...........

---

೧-೧ ಜಲವರೆದೆಗೆದರ್ದುಂ (ಬ) ೨-೨ ಗಲ್ (ಶಾ). ಗೆ (ರಾ) ೩-೩ X (ಶಾ) ೪-೪ ಸು (ಶಾ). ಸಾ(ಗ, ರಾ) ೫-೫ ಲವೆ (ಶಾ). ಳವೆ (ಬ)

**ಶ್ಲೋಕ** : (ಮಾಲಿನೀ ವೃತ್ತ)

[೧]ಮಳೆಯುದಮದದುಬ್ಬಂ[೧] ಬಿಟ್ಟು ಓರಂತೆ ಮತ್ಸ್ಯಂ[೨]
ಗಳ ನಯನದಿ ನೋಡಿ ಹಂಸದಿಂ ಪೋಗಿ [೨]ಕೋಕಂ
ಗಳ ಕುಚೆಯೆದೆಗೊತ್ತುಂ ಕಾಂತಕೂಪಾರಗೆಂದುಂ
ಪೊಳೆಸತಿಯಿರೆ [೩]ಸೋತುಂ[೩] ಬಂದನಾಶ್ವೀಜಮಾಸಂ ೩೩

**ವೃತ್ತ** : ಮತ್ತೇಭ ವಿಕ್ರೀಡಿತ

ಸ್ಮರಬಾಣಂಗಳಿಗಾದುದುತ್ಸಹ ಮಹಾನ್ಮೀಶಮಿತ್ರೈದಶೀ[೪]
ಎರಡೂ ಕಂಗಳಿಗಾದುದೂ ವಿರಹದಿಂದುಟ್ಟಂಬರಂ [೪]ಜಾರ್ದುದು
ಬರಿಮೈಯಪ್ಪಲು ಮಾಡಿದಂ ಹರಿಬರಲ್ತಾನುಟ್ಟುದಂ ಜಾರ್ವಪೋಲ್
ತರುಣೀ ಮಾಡದಡಾನು ಹೆಣ್ಣೆ ಜಗಕೀ ಈಗೇತರಿನ್ನಾಡಲೀ ೩೪

**ಪದ** :

ಶರದಋತುವಿನಾದಿ ಮಾಸದಿ ಆಕಾಶದದೀವಿಗೆಗಳುಲ್ಲಸದಿ
ಪರಿ[೫]ಶೋಭಿ[೫]ಸಲು ನವರಾತ್ರಿಯ ಪೂಜೆಪೂರ್ತಿಯು ಪದ್ಮನಾಭನುನ್ನತಿಯು
ಇರದತಿಶಯ ಪುಷ್ಪಮಾಲೆಯು ರಂಗವಾಲಿಯು ನರಕಚತುರ್ದಶಿಯು
ವರಭೋಗಿ ಸ್ನಾನದಾನಂಗಳು ಧ್ಯಾನಂಗಳು ಮನದೊಳು ಮಾಳ್ಪೆ ನಾನು ೩೫

ಎಂತು ಸೈರಿಸಲಾಪೆ ಸಖೀ ಏಣಾಂಬಕೀ...........

---

೧-೧ ಮಳೆಯದೆ (ಬ) ಮಳೆಯುದದುಬ್ಬಮಂ (ಗ) ೨-೨ X (ಗ) ೩-೩ X (ಬ) ೪-೪ ಜಾರ್ವಪೋಲ್ (ಬ, ಗ) ೫-೫ ರಂಜಿ (ಗ, ರಾ)

**ಶ್ಲೋಕ** : (ಮಾಲಿನೀ ವೃತ್ತ)

ಶರದಮುಸುಕು ಜಾಢ್ಯಂ ಶೈಲವಕ್ಷೋಜದಿಂದಂ
ಅರಿಷಿಣದನುಲೇಪಂ ಪಣ್ತೆಸೇ ಶಾಲಿಯಿಂದಂ
ನೆರೆ ಪಸುರುಡೆಯಿಂದಂ ಮೇಘಮಂ ನಾಣ್ಚಿಸುತ್ತಂ
ಧರೆಸತಿಯಿರೆ [೧]ಚೆಲ್ವಿಂ[೧] ಬಂದ ಕಾರ್ತೀಕ ಮಾಸಂ ೩೬

**ವೃತ್ತ** : ಶಾರ್ದೂಲ ವಿಕ್ರೀಡಿತ

ನಾಕಂಡೆಕನಸೊಂದು ರಾತ್ರಿ[೨][ಯೊಳಗಂ][೨] [೩][ದಿವ್ಯಾಶ್ವರತ್ನಂಗಳಂ][೩]
[೪]ಕಾಕಂ ಕೂಗಿದೆಯೀಗಲಂಗಳದೊಳೇ ಇಂದೇ ಬಹಂ ನಿಶ್ಚಯಂ[೪]
ಶ್ರೀಕಂದರ್ಪನ ಬಾಣಮಲ್ಲಿಗೆಗಳಂ ನಾಮೆಟ್ಟುವೆಂ ಕಾಲಲೀ
[೫]ಶೋಕಂ[೫] ಪಲ್ಲವ ನೀನು ನೋಡು ಸಖಿಯೇ ಎನ್ನಿಶ್ಚಯಂ ಕೃಷ್ಣನು ೩೭

**ಪದ**:

ನಡೆತಂದ ಕಾರ್ತಿಕಮಾಸಕ್ಕೆ ಶುದ್ಧಪಾಡ್ಯಕ್ಕೆ [೬]ಭಾವ[೬]ಬಿದಿಗೆ ಉತ್ಸವಕೆ
ಒಡನೆ ಕ್ಷೀರಾಬ್ಧಿಯರ್ಚನೆಗಳು ದೀವಿಗೆಗಳು ಆಮಲಕವನದೊಳು
ಪೊಡವಿಸುರರು ನಿತ್ಯಭೋಜನ ಕಥಾಪುರಾಣ ದಾಮೋದರ ಧ್ಯಾನ
ಎಡೆವಿಡದುತ್ಥಾನ ದ್ವಾದಶಿ ವಿಷ್ಣುವಿನರ್ಚಿಸಿ ಮುದವೊಡೆವೆ ನಿಶ್ಚೈಸಿ ೩೮

ಎಂತು ಸೈರಿಸಲಾಪೆ ಸಖೀ ಏಣಾಂಬಕೀ.........

---

೧-೧ಸೋತು (ಗ. ರಾ) ೨-೨ ಯಲ್ಲಿ (ಶಾ. ಬ. ಗ. ರಾ) ೩-೩ ದಿವ್ಯಹಯರತ್ನಮಂ (ಶಾ. ಬ. ಗ. ರಾ) ೪-೪ X (ಗ) ೫-೫ ಶೋಕೇ (ಬ) ೬-೬ ಬಾಹು (ಗ. ರಾ). ಬಾಹೋ (ಬ)

**ಶ್ಲೋಕ** : (ಮಾಲಿನೀ ವೃತ್ತ)

ವರಹಿಮ ಶಿಶಿರರ್ತುಂ ಕಂಪನಂ ಕಂಠಕಾಯ್ತು
ಶರಿರಕೆ ಸುವಸಂತಂ ಚಿಂತೆಯುಂ ಗ್ರೀಷ್ಮಕಾಯ್ತು
ವರುಷ ಶರದ [೧]ತೋಯಂ[೧] ಕಾನನಂ ಚಂದ್ರಗಾಯ್ತು
[೨]ಹರಿಬರವೆನಗಿಂದುಂ[೨] ದ್ವಾದದಶಮಾಸ ಪೂರ್ಣಂ ೩೯

**ವೃತ್ತ** : ಮತ್ತೇಭ ವಿಕ್ರೀಡಿತ

ಎವೆಗಳ್ ಮುಚ್ಚದೆ[೩]ನೋಡಿ[೩] ಬೆನ್ನುಕೊಡುವಂ ನಿಂದಪ್ಪಿ ಬಾಯ್ಬಿಚ್ಚುವಂ
ಯುವತೀ [೪]ದೈನ್ಯದಿ[೪] ಬೇಡಿಕೊಂಬೆ ಕೊಡಲೀಯೆಯೆಂಬನಾರಣ್ಯಕೆ
ಜವದಿಂ ಪೋಗಿಯೆ ಗೋವ ಕಾಯ್ವೆನೆನುತಂ ನಿರ್ಗ್ರಂಥ ರೂಪಾಗನೇ
ಅವನೇ ಪ್ರೀತಿಯ [೫]ಹಾರು[೫]ತ್ತಿಪ್ಪನೆನುತಂ ತಾನೊಲ್ದುದೇ ಭಾಗ್ಯವು ೪೦

**ಪದ** :

ಇರದೆನ್ನಂ ಬರಸೆಳೆದಪ್ಪಿದ ಮುದ್ದುಗುಪ್ಪಿದ ಚುಬುಕಾಗ್ರವ ಪಿಡಿದ
ವರಮೃದುತಲ್ಪದಿ ನೆರೆದನು ಲಲ್ಲೆಗರೆದನು ನಖದಿಂದಲಿರಿದನು
ಗುರುಕುಚಗಳ[೬]ನೊತ್ತಿ[೬]ಸುರತದಿ ಸುಖಭರಿತದಿ ದಣಿಸಿದ ಕೃಪಾಶರಧಿ ೪೧

ಎಂತು ಸೈರಿಸಲಾಪೆ ಸಖೀ ಏಣಾಂಬಕೀ..........

---

೧-೧ ತೋಷಂ (ಗ. ರಾ) ೨-೨ ಹರಿಬರಲೆನಗದಂ (ಗ). ಹರಿಬರಲಂದಂ (ಬ) ೩-೩ X (ಗ. ರಾ)
೪-೪ ಧ್ಯಾನದಿ (ರಾ) ೫-೫ ಆರು (ಬ. ಗ). ಗ್ಯಾರು (ರಾ) ೬-೬ ನಿಟ್ಟು (ಗ. ರಾ)

**ವೃತ್ತ** : ಶಾರ್ದೂಲ ವಿಕ್ರೀಡಿತ

ಈ ಪನ್ನೀರ್ವರ ಮಾಸವೃತ್ತ ಪದಮಂ ವಿಶ್ವಾಸದಿಂ ಪೇಳ್ವರಂ
೧ಲೋಪಾ೧ಬುದ್ಧಿಯ ಬಿಟ್ಟು ಲಾಲಿಸುವರಂ ವಿಸ್ತಾರಮಂ ಗೈವರಂ
ಶ್ರೀ ಪಂಕೇರುಹನಾಭನೊಲ್ದು ಪೊರೆವಂ ಬೇಳ್ದರ್ಥಮಂ ಪಾಲಿಪಂ
ಪಾಪಂ ಪೋಪುದು ಸಿದ್ಧಿಯಪ್ಪುದು ಮಹಾದೈಶ್ವರ್ಯ ಮುಂತಪ್ಪದುಂ ೪೨

**ಪದ** :

ಧರೆವೆಣ್ಣುಶಿರದ ಮಾಣಿಕದೊಲು ರಾಜಿಪ ಮೇಲು ರಾಯಚೂರು ಸೀಮೆಯೊಳು
ಮೆರೆವ ಕಲ್ಲೂರು ಗ್ರಾಮದಿ ನಿಂದು ಭಕುತರ ಬಂಧು ತಾನೇ ದಯಾ ಸಿಂಧು
ಪೊರೆಯುತಿರ್ಪನು ಸ್ಮರಿಸುವರನು ಭಜಿಸುವರನು ವೆಂಕಟೇಶನು ತಾನು
ಸ್ಥಿರವಾದ ಸೌಭಾಗ್ಯವೀವನು ದೇವದೇವನು ಸಿರಿದೇವಿಯಾಧವನು ೪೩

ಎಂತು ಸೈರಿಸಲಾಪೆ ಸಖೀ ಏಣಾಂಬಕೀ..............

---

೧-೧ ಲೋಪ (ರಾ)

# ಅನುಬಂಧಗಳು


೧. ವೃತ್ತ ಪದಗಳ ಅಕಾರಾದಿ

೨. ಕಠಿನ ಶಬ್ದಕೋಶ

೩. ಹನ್ನೆರಡು ತಿಂಗಳುಗಳ ವಿಷ್ಣುವಿನ ಹೆಸರುಗಳು ಮತ್ತು ಅವತಾರಗಳಿರುವ ವೃತ್ತಗಳ ಸಂಖ್ಯೆ

೪. ಒಂದೇ ವೃತ್ತದಲ್ಲಿ ಹತ್ತು ಅವತಾರಗಳು

೫. ಗುಂಡಿನ ಗಣೇಶ ಸ್ತುತಿ

೬. ಪತ್ರ ೧

೭. ಪತ್ರ ೨

೮. ಹಬ್ಬ ಮತ್ತು ಉತ್ಸವಗಳು

೯. ದಂಪತಿ ವೃಕ್ಷಗಳು

೧೦. ಬಲಾರಣ್ಯ

೧೧. ದ್ವಾರಕಾ

೧೨. ವೈದಿಕ ಬೌದ್ಧಾವತಾರ

೧೩. ಪತ್ರ ಎರಡರ ಮೂಲ ಪ್ರತಿ

೧೪. ಸಿತ್ಯಾನಂದೇಶ್ವರ ಬಾರಮಾಸದ ಪಾರಿಜಾತ

# ವೃತ್ತ ಪದಗಳ ಅಕಾರಾದಿ

**ಮುಂದೆ ಸಂಖ್ಯೆಗಳನ್ನು ಕೊಟ್ಟಿದೆ**


ಅಡವಿಯ ನಗಜಾತಕಗ್ನಿಯಂ - ೨೧
ಅತಿಗ್ರೀಷ್ಮದಾಷಾಢ ಜವದೊಳು - ೨೬
ಆದಿಕ್ಕಿಂ ಬಹಗಾಳಿಯಂ ವಿಹಗಮಂ - ೨೨
ಇರದೆನ್ನಂ ಬರಸೆಳೆದಪ್ಪಿದ - ೪೧
ಈಗ ಬಂದುದು ಜೇಷ್ಠಮಾಸವು - ೨೩
ಈ ಪನ್ನೀರ್ವರ ಮಾಸ ವೃತ್ತ ಪದಮಂ - ೪೨
ಈ ಬೆಳ್ದಿಂಗಳು ಶೈತ್ಯವೆಂದು ನುಡಿವರ್ - ೧೩
ಈ ಮಾರ್ಗಶಿರ ಮಾಸ ಬರಲಾಗಿ - ೫
ಎನಗೀ ರತ್ನ ಸುವರ್ಣಕಾಂತಿ ಗೃಹಮುಂ - ೨೮
ಎನ್ನಂ ಕುಸ್ತರಿಸುತ್ತ ಭಾಷೆಗರೆದಂ - ೪
ಎನ್ನಿಂದೋದಲು ಕಲ್ತ ಕನ್ನಡ ವಿಹಂಗಂ - ೧೬
ಎಲೆ ಪ್ರಿಯಳೆ ನಿನ್ನ ರೂಪೀಗ ತೋರೆ - ೧
ಎಲ್ಲೋ ಕಬ್ಬಿನ ಬಿಲ್ಲು ಸುಳ್ಳು ಕುಸುಮಂ - ೧೯
ಎವೆಗಳ್ ಬಿಚ್ಚದೆ ನೋಡಿ ಬೆನ್ನು - ೪೦
ಎಳಪಿಕಗಳ ಬಾಯಾ ಬೀಗಮಂ - ೧೫
ಕಡುದಶಶತ ಜ್ವಾಲಾ ಕೈಗಳಿಂ - ೨೪
ಕಮಲ ಕುಮುದ ಬಾಣಶೀತದಿಂ - ೯
ಕಳೆಗಳಳಿದ ರಶ್ಮೀಯಾಂತ ಎನ್ನಿಂದ - ೧೨

| | | |
|---|---|---|
| ಗಿಳಿ ಝುಳ ಹಯಮೇರ್ದುಂ | - | ೧೮ |
| ಚಳಿಗುಂ ಭೇಷಜ ಸ್ತ್ರೀಯರೋಜೆ | - | ೭ |
| ಜಲದದಲೆಗೆದರ್ದುಂ ಮಿಂಚಿನಿಂ | - | ೨೭ |
| ತಳರ್ ಬೇಡವ್ವೆ ದೂರದ ಪಯಣಮಾಗಿ | - | ೨ |
| ಧರೆವೆಣ್ಣು ಶಿರದಮಾಣಿಕದೊಲು | - | ೪೩ |
| ನಡೆತಂದ ಕಾರ್ತಿಕ ಮಾಸಕ್ಕೆ ಶುದ್ಧ | - | ೩೮ |
| ನಳಿನಳಿಪರಸಾಲಮ್ಮೆಂಬ ಪೇರಾನೆ | - | ೩೦ |
| ನಾ ಕಂಡೆ ಕನಸೊಂದು ರಾತ್ರಿಯೊಳಗಂ | - | ೩೭ |
| ಪತಿಯಗಲಿ ಬಳಲ್ದುಂ ಚಿಂತಿಸುತ್ತಿರ್ಪ | - | ೩ |
| ಪುಸಿಯಲ್ಲಂಗನೆ ಕೇಳು ಭೂಮಿ | - | ೨೫ |
| ಬಂದುದೀಗಳೆ ಪುಷ್ಯಮಾಸವು | - | ೮ |
| ಬಂದುದು ಫಾಲ್ಗುಣ ಮಾಸವು | - | ೧೪ |
| ಬಂದುದು ಶ್ರಾವಣ ಮಾಸವು | - | ೨೯ |
| ಬರಲು ವೈಶಾಖದ ಒಸಗೆಯು | - | ೨೦ |
| ಮಳೆಯುದಮದದುಬ್ಬಂ ಬಿಟ್ಟು | - | ೩೩ |
| ಮಾಘಮಾಸದಿ ಮಾವು ನೇರಿಲು | - | ೧೧ |
| ಯುವತೀ ಕೇಳು ವಿದೇಹದೇಹ | - | ೧೦ |
| ವರಚೈತ್ರ ಬರೆ ಮೋಹಿಗಳ್ ಕೂಡಿ | - | ೧೭ |
| ವರಭಾದ್ರಪದ ಮಾಸನೈತಂದ | - | ೩೨ |
| ವರ ಹಿಮಶಿಶಿರರ್ತುಂ ಕಂಪನಂ | - | ೩೯ |
| ಶರದ ಋತುವಿನಾದಿ ಮಾಸದಿ | - | ೩೫ |
| ಶರದ ಮುಸುಕು ಜಾರ್ದುಂ | - | ೩೬ |
| ಸ್ಮರಬಾಣಂಗಳಿಗಾದುದುತ್ಸಹ | - | ೩೪ |
| ಹತ್ತಲ್ ವೃಕ್ಷವ ವೀರರಾದ | - | ೩೧ |
| ಹರಿಯೆದೆ ಹರಮ್ಮೆಯಂ | - | ೬ |

# ಕಠಿಣ ಶಬ್ದ ಕೋಶ

## ಅರ್ಥದ ಮುಂದೆ ವೃತ್ತ ಪದಗಳ ಸಂಖ್ಯೆ ಸೂಚಿಸಿದೆ

| | | | |
|---|---|---|---|
| ಅಧರ | - | ಕೆಳದುಟಿ | ೧ |
| ಅನಂಗ | - | ಕಾಮ | ೬ |
| ಅನುಲೇಪ | - | ಸವರು, ಹಚ್ಚು | ೩೬ |
| ಅಬ್ದಾಗ್ನಿಃ | - | ಮಿಂಚು | ೧೩ |
| ಅಂಬರ | - | ಬಟ್ಟೆ | ೩೮ |
| ಅರ್ಕ | - | ಸೂರ್ಯ | ೧೩ |
| ಅರ್ತಿ | - | ಪ್ರೀತಿ, ಸುಖ | ೮ |
| ಅಳಿ | - | ದುಂಬಿ | ೧೫ |
| ಆಮಲಕ | - | ನೆಲ್ಲಿಕಾಯಿ | ೩೮ |
| ಆಸ್ಯ | - | ಮುಖ | ೬ |
| ಇನಿ | - | ಮಧುರ | ೨೮ |
| ಇಂದ್ರಗೋಪ | - | ಮಳೆಹುಳು, ಹೊನ್ನಿಹುಳು, ಮಿಂಚುಹುಳು | ೨೬ |
| ಇಳೆವರ | - | ರಾಜ | ೩೦ |
| ಉತ್ಥಾನ | - | ಏಳುವಿಕೆ | ೩೮ |
| ಉದಮದ | - | ಅತಿಯಾದ ಸೊಕ್ಕು | ೩೩ |
| ಎಲ್ಲೋ | - | ಎಲ್ಲಿದೆಯೋ | ೧೯ |
| ಎಸು | - | ಬಾಣಹೊಡೆ,<br>(ಎಚ್ಚು ಅಂದರೆ ಬಾಣ ಹೊಡೆದು) | ೧೦ |
| ಏಣಾಂಬಕಿ | - | ಚಿಗರೆಗಣ್ಣುಳ್ಳವಳು | ೫ |
| ಐರಿಲ | - | ತಂಪು, ಶೀತ, ಚಳಿ, ಹಿಮ | ೭ |
| ಒಡರಿಚು | - | ಮಾಡು | ೨೬, ೨೮ |
| ಒಸಗೆ | - | ಸಮಾರಾಧನೆ, ಉತ್ಸವ, ಸಂತೋಷ, ಕಾಣಿಕೆ | ೨೦ |
| ಒಸೆ | - | ತೃಪ್ತಿ, ತರ್ಪಣ | ೨೦ |

| | | | |
|---|---|---|---|
| ಓಜೆ | - | ಸಾಲು, ಕಾಂತಿ, ಸೌಂದರ್ಯ | ೫, ೭ |
| ಓರಂತೆ | - | ಚೆನ್ನಾಗಿ, ಒಂದೇ ಕ್ರಮವಾಗಿ | ೫, ೭ |
| ಕಂಸ | - | ಕಂಚು, ಹಿತ್ತಾಳೆ | ೨೦ |
| ಕಂಸಪಾತ್ರೆ | - | ಹಿತ್ತಾಳೆ, ಕಂಚು, ಚಿನ್ನಬೆಳ್ಳಿಗಳಿಂದಾದ ಪಾತ್ರೆ | ೨೦ |
| ಕಟಾಕ್ಷ | - | ಕಡೆಗಣ್ಣು, ಕಡೆಗಣ್ಣುನೋಟ | ೯ |
| ಕನ್ನಡ ವಿಹಂಗ | - | ಗಿಳಿ | ೧೬ |
| ಕಂದರ್ಪ | - | ಕಾಮ | ೩೭ |
| ಕರಗ | - | ಜಲಪಾತ್ರೆ, ಕಮಂಡಲು | ೨೦ |
| ಕುಸ್ತರಿಸು | - | ಸಂತೈಸು, ಸಮಾಧಾನ ಪಡಿಸು | ೪ |
| ಕೂಪಾರ | - | ಸಮುದ್ರ | ೩೩ |
| ಕೂಷ್ಮಾಂಡ | - | ಕುಂಬಳಕಾಯಿ | ೧೧ |
| ಕೇತಕಿ | - | ಕೇದಗೆ | ೩೦ |
| ಕೊಡರುಹ | - | ಅಗಸ್ತ್ಯ | ೨೧ |
| ಕೋಕ | - | ಚಕ್ರವಾಕ | ೩೩ |
| ಖತಿ | - | ಸಿಟ್ಟು | ೩ |
| ಖಳಾರಾತಿ | - | ಕೃಷ್ಣ | ೨ |
| ಖಿಲ | - | ಕುಗ್ಗಿದ, ಹಾಳಾದ, (ಸಮೀಪ?) | ೧೨ |
| ಗುಡ | - | ಬೆಲ್ಲ | ೨೦ |
| ಗುಪ್ಪು | - | ರಾಸಿಮಾಡು | ೪೧ |
| ಗುರು | - | ದೊಡ್ಡ | ೪೧ |
| ಗ್ರೀಷ್ಮ | - | ಸೆಕೆ, ಬಿಸಿ, ಒಂದು ಋತು | ೨೧ |
| ಚಂಡರೋಚಿ | - | ಸೂರ್ಯ | ೨೪ |
| ಚರ್ವಿಸು | - | ತಿನ್ನು | ೪ |
| ಚುಬುಕ | - | ಗದ್ದ | ೪೧ |
| ಚೂತರುಜ | - | ಮಾವಿನಗಿಡ | ೩೧ |
| ಚೇತೋಸಂಭವ | - | ಕಾಮ | ೩೧ |
| ಜಡ | - | ನೀರು | ೨೧ |
| ಜಲದ | - | ಮೋಡ | ೨೭ |

| | | | |
|---|---|---|---|
| ಜಲೇಜಾಕ್ಷಿ | - | ಕಮಲ ನಯನೆ | ೧ |
| ಜವ | - | ತೀವ್ರ | ೨೬ |
| ಜವಳಿ | - | ಎರಡು, ಜೋಡಿ | ೧೦ |
| ತಟಾಕ | - | ಕೆರೆ, ಸರೋವರ | ೨೧ |
| ತತಿ | - | ಸಮೂಹ | ೩ |
| ತಂಬಿಸು | - | ನಿಲ್ಲಿಸು, ತಡೆಹಿಡಿ | ೩೧ |
| ತರ್ಪಣ | - | (ತೃಪ್ತಿ), ಮೃತರಿಗಾಗಿ ಮಾಡುವ ವಿಧಿವಿಧಾನ | ೧೧ |
| ತಲ್ಪ | - | ಹಾಸಿಗೆ | ೪೧ |
| ತಳರ್ | - | ಹೋಗು, ಪ್ರಯಾಣ ಮಾಡು | ೨ |
| ತಳಿರ್ಬಾಣ | - | ಕಾಮ | ೨ |
| ತಳ್ಕು | - | ಆಲಿಂಗನ | ೭ |
| ತ್ರಿವಿಕ್ರಮ | - | ವಿಷ್ಣು | ೨೩ |
| ದಾ | - | ಹತ್ತು, (ಹತ್ತು ತೆರನಾಗಿ) | ೨೨ |
| ಧವ | - | ಗಂಡ | ೪೩ |
| ಧ್ವಾನ | - | ಧ್ವನಿ, ದೊಡ್ಡದನಿ | ೨೮ |
| ನಗ | - | ಗಿಡ, ಮರ, ಬೆಟ್ಟ | ೨೧ |
| ನಭ | - | ಆಕಾಶ | ೫ |
| ನಾಗವೈರಿ | - | ಗರುಡ | ೨೬ |
| ನಿರ್ಗ್ರಂಥ | - | ಬುದ್ಧ? | ೪೦ |
| ನೋಂಪಿ | - | ವ್ರತ | ೩೨ |
| ಪಕ್ಕ | - | ರೆಕ್ಕೆ | ೧೧ |
| ಪಥಿಕ | - | ಪ್ರಯಾಣಿಕ | ೨೧ |
| ಪದ್ಮ | - | ನೀರು, ಸರೋವರ, (ಕಮಲ) | ೧ |
| ಪನ್ನೀರ್ವರು | - | ಹನ್ನೆರಡು | ೪೨ |
| ಪರಿತೋಷ | - | ಸಂತೋಷ | ೮ |
| ಪಲ್ಲವ | - | ಪ್ರೇಮ, ಚಿಗುರೆಲೆ | ೩೨ |
| ಪಿಕ | - | ಕೋಗಿಲೆ | ೩ |
| ಪುಗು | - | ಒಳಹೋಗು | ೨೫ |

| | | |
|---|---|---|
| ಪೂಸರ | - ಬಾಣ | ೧೦ |
| ಪಂಕೇರುಹನಾಭ | - ವಿಷ್ಣು | ೪೨ |
| ಪೃಥ್ವೀಜಾತ | - ಗಿಡ | ೩೧ |
| ಪೇರಾನೆ | - ದೊಡ್ಡಾನೆ | ೩೦ |
| ಪೋರ್ | - ಹೋರಾಡು, (ಪೋರು) ಕಲಹಮಾಡು | ೨ |
| ಪ್ರಮದೆ | - ಚಲುವೆ | ೯ |
| ಪ್ರಮಾಣು | - ಮಿತಿ, ಮೇರೆ | ೨ |
| ಪುಲ್ನಾಂಬಕ | - ವಿಷ್ಣು | ೧೯ |
| ಬಲ | - ಒಬ್ಬ ರಕ್ಕಸ, ಕಾಮ, ಬಲರಾಮ | ೧ |
| ಬಾಗಿನ | - ಮುತ್ತೈದೆಯರಿಗೆ ಕೊಡುವ ಉಡುಗೊರೆ | ೮ |
| ಬಿಜ್ಜಣ | - ಬೀಸಣಿಕೆ | ೨೦ |
| ಬಿಸಿದೊಟ್ಟಿಲು | - ಸಮುದ್ರ? ಬಡಬಾಗ್ನಿ? | ೨೫ |
| ಬೆಂದಂಗ | - ಕಾಮ | ೧೩ |
| ಬೇಳ್ | - ಬೇಡು | ೪೨ |
| ಭಾಂಡ | - ವಸ್ತು, ಒಡವೆ, ಕೊಡ | ೮ |
| ಭಾಷೆಗರೆ | - ಮಾತಾಡು | ೪ |
| ಭಾಷ್ಕಳ | - ಸುಳ್ಳು? | ೧೯ |
| ಭುಂಜಿಸು | - ಊಟಮಾಡು | ೪ |
| ಭೃಂಗಾಳಿಕೆ | - ತುಂಬಿಯಂತೆ ಮುಂಗುರುಳುಳ್ಳವಳು | ೭ |
| ಭ್ರೂಣ | - ಗರ್ಭದೊಳಗಿನ ಪಿಂಡ | ೯ |
| ಭೇಷಜ | - ಔಷಧ | ೭ |
| ಮಧುಸೂದನ | - ಕೃಷ್ಣ | ೨೦ |
| ಮನೋಪದ್ಮ | - ಮನಸ್ಸೆಂಬ ಸರೋವರ | ೧ |
| ಮಯೂರ | - ನವಿಲು | ೨೭ |
| ಮಾರ | - ಕಾಮ | ೯ |
| ಮೇಘ | - ಆಕಾಶ, ಮುಗಿಲು | ೩೬ |
| ರವ | - ಧ್ವನಿ, ಕಲಾಟೆ, ಕೂಗು | ೩ |
| ರಶ್ಮಿ | - ಕಿರಣ | ೧೨ |

| | | | |
|---|---|---|---|
| ರಸಾಲ | - | ಸಿಹಿಮಾವು (ರಸದಾಳೆಕಬ್ಬು) | ೩೦ |
| ರಾಜಿ | - | ಸಮೂಹ | ೧೪ |
| ರಾಯಸ | - | ಸಂದೇಶ | ೨೩ |
| ರೋಚಿ | - | ಕಿರಣ | ೧೩ |
| ಲೋಪ | - | ಸವರುವುದು | ೪ |
| ವಕ್ಷೋಜ | - | ಮೊಲೆ | ೩೬ |
| ಶಾಲಿ | - | ಭತ್ತ, ಕವಳೆ | ೩೬ |
| ಸಮೀರ | - | ಗಾಳಿ | ೩೦ |
| ಸವಿಗೋಲು | - | ಕಬ್ಬು | ೧೭ |
| ಸಸಿನೆ | - | ಚೆನ್ನಾಗಿ, ಸಮನಾಗಿ | ೨೫ |
| ಸಿಂಧು | - | ಸಮುದ್ರ | ೪೩ |
| ಸೂಡು | - | ಮುಡಿಸು, ಹೂಮುಡುದುಕೊಳ್ಳು | ೧೭ |
| ಸೈತಿರು | - | ಸುಮ್ಮನಿರು, ಮಾತಾಡದಿರು | ೨ |
| ಸೌವಾಸ | - | ಚೆನ್ನಾದವಾಸ, ಒಳ್ಳೆಯ ಮನೆ | ೨೮ |
| ಹಯ | - | ಕುದುರೆ | ೧೮ |
| ಹಾರು | - | ಬಯಸು, ಜಿಗಿ | ೪೦ |
| ಹಿಮನಗ | - | ಹಿಮಾಲಯ | ೧೨ |
| ಹೇಮಾಂಬರ | - | ಪೀತಾಂಬರವುಳ್ಳವನು, ಕೃಷ್ಣ | ೫ |

## ಹನ್ನೆರಡು ತಿಂಗಳುಗಳ ವಿಷ್ಣುವಿನ ಹೆಸರುಗಳು

| | | | |
|---|---|---|---|
| ೧. | ಮಾರ್ಗಶಿರ | - | ಕೇಶವ |
| ೨. | ಪುಷ್ಯ | - | ನಾರಾಯಣ |
| ೩. | ಮಾಘ | - | ಮಾಧವ |
| ೪. | ಫಾಲ್ಗುಣ | - | ಗೋವಿಂದ |

| | | | |
|---|---|---|---|
| ೫. | ಚೈತ್ರ | - | ವಿಷ್ಣು |
| ೬. | ವೈಶಾಖ | - | ಮಧುಸೂದನ |
| ೭. | ಜೇಷ್ಠ | - | ತ್ರಿವಿಕ್ರಮ |
| ೮. | ಆಷಾಢ | - | ವಾಮನ |
| ೯. | ಶ್ರಾವಣ | - | ಶ್ರೀಧರ |
| ೧೦. | ಭಾದ್ರಪದ | - | ಹೃಷಿಕೇಶ |
| ೧೧. | ಆಶ್ವೀಜ | - | ಪದ್ಮನಾಭ |
| ೧೨. | ಕಾರ್ತಿಕ | - | ದಾಮೋದರ |

## ಹತ್ತು ಅವತಾರಗಳಿರುವ ವೃತ್ತಗಳ ಸಂಖ್ಯೆ

| | ಅವತಾರ | ವೃತ್ತಸಂಖ್ಯೆ |
|---|---|---|
| ೧. | ಮತ್ಸ್ಯಾವತಾರ | ೧೦ |
| ೨. | ಕೂರ್ಮಾವತಾರ | ೧೩ |
| ೩. | ವರಾಹ ಅವತಾರ | ೧೬ |
| ೪. | ನರಸಿಂಹ ಅವತಾರ | ೧೯ |
| ೫. | ವಾಮನಾವತಾರ | ೨೨ |
| ೬. | ಪರಶುರಾಮಾವತಾರ | ೨೫ |
| ೭. | ರಾಮಾವತಾರ | ೨೮ |
| ೮. | ಕೃಷ್ಣಾವತಾರ | ೩೧ |
| ೯. | ಬೌದ್ಧಾವತಾರ | ೩೮ |
| ೧೦. | ಕಲ್ಕಿ ಅವತಾರ | ೩೨ |

## ಒಂದೇ ವೃತ್ತದಲ್ಲಿ ಹತ್ತು ಅವತಾರಗಳು

### ವೃತ್ತ ಸಂಖ್ಯೆ ೪೦

ಎವೆಗಳ್ ಮುಚ್ಚದೆ ನೋಡಿ ಬೆನ್ನು ಕೊಡುವಂ ನಿಂದಪ್ಪಿ ಬಾಯ್ಬಿಚ್ಚುವಂ
ಯುವತೀ ದೈನ್ಯದಿ ಬೇಡಿಕೊಂಬೆ ಕೊಡಲೀಯೆಯೆಂಬನಾರಣ್ಯಕೆ
ಜವದಿಂ ಪೋಗಿಯೆ ಗೋವಕಾಯ್ವನೆನುತಂ ನಿರ್ಗ್ರಂಥ ರೂಪಾಗನೇ
ಅವನೇ ಪ್ರೀತಿಯ ಹಾರುತಿಪ್ಪನೆನುತಂ ನಾನೊಲ್ದುದೇ ಭಾಗ್ಯವು

| | | | |
|---|---|---|---|
| ೧. | ಎವೆಗಳ್ ಮುಚ್ಚದೆ ನೋಡಿ | - | ಮತ್ಸ್ಯಾವತಾರ |
| ೨. | ಬೆನ್ನುಕೊಡುವಂ | - | ಕೂರ್ಮಾವತಾರ |
| ೩. | ನಿಂದಪ್ಪಿ | - | ವರಾಹ ಅವತಾರ |
| ೪. | ಬಾಯ್ಬಿಚ್ಚುವಂ | - | ನರಸಿಂಹ ಅವತಾರ |
| ೫. | ದೈನ್ಯದಿ ಬೇಡಿಕೊಂಬೆ | - | ವಾಮನಾವತಾರ |
| ೬. | ಕೊಡಲೀಯೆ | - | ಪರಶುರಾಮಾವತಾರ |
| ೭. | ಅರಣ್ಯಕೆ ಜವದಿಂ ಪೋಗಿ | - | ರಾಮಾವತಾರ |
| ೮. | ಗೋವಕಾಯ್ವ | - | ಕೃಷ್ಣಾವತಾರ |
| ೯. | ನಿರ್ಗ್ರಂಥ ರೂಪಾಗನೇ | - | ಬೌದ್ಧಾವತಾರ |
| ೧೦. | ಅವನೇ ಪ್ರೀತಿಯ ಹಾರುತಿಪ್ಪ | - | ಕಲ್ಕಿ ಅವತಾರ |

## ಗುಂಡಿನ ಗಣೇಶ ಸ್ತುತಿ

ಗಣೇಶನ ಸ್ತುತಿಯಿರುವ ಹಸ್ತಪ್ರತಿಯಲ್ಲಿ ಅನೇಕ ಜ್ಯೋತಿಷ್ಯದ ವಿಷಯಗಳಿವೆ. ಅಪ್ರಮಾಣ ಕೂಡಲ ಸಂಗಮದೇವಾ ವಚನಗಳಿವೆ. ನಿಃಕಲ ಪದ್ಯಗಳಿವೆ. ಕರಕಂಠಶತಕವಿದೆ. ಮರುಳಶಂಕರದೇವರ ವಚನಗಳಿವೆ. ಸಪ್ಪಣ್ಣಾರ್ಯರ ಪದ್ಯಗಳಿವೆ. ರತ್ನಪರೀಕ್ಷೆ. ಹವಳ ಪರೀಕ್ಷೆ ಮತ್ತು ಮುತ್ತು ಪರೀಕ್ಷೆಗಳಿವೆ. ಜಲ ಶಿಲ್ಪಿಯಿದೆ. ಏನುಲಿ ಚೆನ್ನಬಸವೇಶ್ವರನ ಪದಗಳಿವೆ. ಇನ್ನೂ ಅನೇಕ ವಿಷಯಗಳು ಈ ಹಸ್ತಪ್ರತಿಯಲ್ಲಿ ಇವೆ.

ಈ ಹಸ್ತಪ್ರತಿಯ ನಡುವೆ ಎರಡು ಕಡೆ ಸಾಲ ಕೊಟ್ಟಿದ್ದು ಮತ್ತು ಸಾಲಿ ಮೊಕರರ್ (ನೇಮಿಸು) ಮಾಡಿದ್ದು ವಿಷಯಗಳಿವೆ. ಸಾಧಾರಣನಾಮ ಸಂವತ್ಸರದ ನಿಜವೈಶಾಖಶುದ್ಧ ೭ ಯಲ್ಲು ಸಾಲಿ ಮೊಕರರು ಮಾಡಿದ್ದು, ಪರಿಧಾವಿ ಪ್ರಮಾದೀಚ ಸಂವತ್ಸರಗಳಲ್ಲಿ ಸಾಲಕೊಟ್ಟ ವಿವರಗಳಿವೆ. ವಿರೋಧಿ ಸಂವತ್ಸರದಲ್ಲಿ ಸಾಲಕೊಟ್ಟ ದಾಖಲೆಯೂ ಇದೆ.

ವಿರೋಧಿ ಸಂವತ್ಸರದಿಂದ ಪ್ರಮಾದೀಚ ಸಂವತ್ಸರದವರೆಗೆ ವಿವರಗಳು ಇದರಲ್ಲಿ ಸಿಗುವುದರಿಂದ ಮತ್ತು ಕೋರಿ ಕಾಗದದ ದೃಷ್ಟಿಯಿಂದ ಇದು ೧೫೦ ವರ್ಷಕ್ಕಿಂತ ಹಿಂದಿನದಲ್ಲವೆಂದು ನಿರ್ಣಯಿಸಬಹುದು. (ವಿರೋಧಿ ಸಂವತ್ಸರದಿಂದ ಎರಡು ಸುತ್ತು ಸಂವತ್ಸರದ ಲೆಕ್ಕ ಹಿಡಿಯಬೇಕಾಗುತ್ತದೆ)

**ಶ್ರೀಗುರುಬಸವಲಿಂಗಾಯನಮಃ**

**ಗುಂಡಿನ ಗಣೇಶನ ಸ್ತುತಿ**

ಜಯಜಯ ಗಣಪತಿ ಜಯಜಯ ಗಣಪತಿ
ಜಯಜಯ ಗಣಪತಿ ಗಣನಾಥಾ
ಪಾಲಿಸು ಗಣಪತಿ ಪಾಲಿಸು ಗಣಪತಿ
ಪಾಲಿಸು ಗಣಪತಿ ಗಣನಾಥಾ ಪಲ್ಲವಿ

ಮಣಿದೆರಗುವೆ ಗುಣಮಣಿ ಗಣ
ಪನ ಪದವನಜಕೆ ಸದ್ಭಕ್ತಿಗಳಿಂದ
ಎಣೆಯಿಲ್ಲದೆ ನಾ ತ್ರಿಣಯನ ಪುತ್ರನ
ಗುಣಗಳನೆಲ್ಲವ ಪೊಗಳುವೆನು ೧

ಮತಿಗಳನೀವಪ್ರತಿಗಣನಾಯಕ
ಮತಿಗಳನುಳ್ಳವ ನಾನಲ್ಲ
ಮತಿಗಳ ಮಿಗೆ ಸದ್ಗತಿಗಳ ಕೊಟ್ಟೈ
ನ್ನತಿಶಯವನು ಮಾಡೆಲೊ ಬೆನಕ ೨

ಸಪ್ಪಳ ಮಾಡದೆ ತುಪ್ಪದಲದ್ದುತ
ಚಪ್ಪರಿದುಂಬುವ ಸವಿಗಾರ
ಹಪ್ಪಳ ಸಂಡಿಗೆ ಉಪ್ಪಿನ ಕಾಯಿಗೆ
ಒಪ್ಪಿವೆ ದೃಷ್ಟಿ ತೆರೆದು ನೋಡಾ

ಒಕ್ಕಳ ಗಂಟೆಯು ನೆಲಕೆಳೆಯಲು
ಪಾದೋತ್ತಿಲಿ ತೊಡರಿದ ಹೇರಂಬಾ
ತಕ್ರ ಮೊಸರು ಯಾಲಕ್ಕಿಯು ಸೊಂಟಿಯು
ಇಕ್ಕಿವೆ ದೃಷ್ಟಿ ತೆರೆದು ನೋಡಾ

ಬಳಲುವ ಕಿವಿಗಳ ಅಲುಗಿಸಿದೋರಲು
ಇಲಿಗುದುರೆಯನೇರುವ ಜಾಣಾ
ಬಿಳಿಯೆಲೆ ಕೈರದ ಗುಳಿಗಿಯು ಕರ್ಪೂರ
ದಳೆದಡಕೆಯು ಸುಣ್ಣವ ನೋಡಾ

ಕೆದವದ ಮುರುಗ ಹೊಡೆವುತ ಪಾಳದಿ
ಕದೆಮೆಟ್ಟುತ ಕುಣಿದಾಡುವನೆ
ಧಡಧಡ ನೋಡುವ ಕದುಬಿಲಿ ತೇಜಿಯ
ಬಡಿವುತ ಒಡಿದೇರುವ ಜಾಣಾ

ಅಂಗೈ ತೋಟಿಲಿ ಇಲಿಗುದರಿಗೆ ಕಬ
ಳಂಗಳ ಮೇಸುವ ದೊರೆರಾಯ
ಇಂಗು ಮೆಣಸುಲವಣಾಂಗಳು ಮಧುರಾನ್ನ
ತಾಗಳು ಮುಂದೊಟ್ಟಿವೆ ನೋಡಾ

ಕೊಡಲಿಯು ಕೈಯಲಿ ಒಡಿದ ಬಳಿಕ ನೀ
ಕೊಡಲಿಕ್ಕೆ ಬೇಡೆಂಬುವರಾರು
ಕೊಡು ಕೊಡು ಮತಿಗಳ ಕೊಡು ಕೊಡುಗತಿಗಳ
ಕೊಡು ಕೊಡು ಮುಕ್ತಿಯ ಮಾರ್ಗವನು

ಧಾರುಣಿಗಧಿಕ ಶೃಂಗಾರವೆನಿಪ ಕ
ಲ್ಲೂರೊಳು ಲಿಂಗನ ಪಾಲಿಸುವ
ಮಾರಟ ಶಿವನ ಕುಮಾರನೆನಿಪ ರಣ
ಶೂರನು ಗುಂಡಿನ ಗಣನಾಥಾ ೨೧

ಬಾರಮಾಸ ಕೃತಿಕರ್ತ ಲಿಂಗಣ್ಣನ ಮೊಮ್ಮೊಗನಾದ ಲಿಂಗಣ್ಣನು ತನ್ನ ಕಾವ್ಯ "ವರರಮ್ಯ ರತ್ನಾಕರ"ದಲ್ಲಿ ಇದೇ ಗುಂಡಿನ ಗಣೇಶ್ವರನ ಸ್ತುತಿಯನ್ನು ಮಾಡಿದ್ದಾನೆ. ಇದು ಭಾಮಿನೀ ಷಟ್ಪದಿಯಲ್ಲಿದೆ

ತನುಜರಕ್ಕರು ತಾಯಿಗಗ್ಗಳ
ವೆನಿಪುದಂ ಜಗಕರುಹವೋಲಿ
ಯ್ಯನ ಕವಾಟವ ಕಾಯುತಾಂಟೆಯ ಬೆನ್ನಬಿಡೆನೆಂದು
ತನಯರಾಟವ ತೋರಿದೋಲ್ಬಗ
ಜನನಿ ಕಾಳಿಯ ಬೆನ್ನಲೊಪ್ಪುವ
ಘನಮಹಿಮ ಗುಂಡಿನ ಗಣೇಶ್ವರನೀವುದಭಿಮತವ

## ಪತ್ರ ೧

ಶಾಲಿವಾಹನ ಶಕ ೧೫೩೩ ನೇ ವಿರೋಧಿಕೃತುನಾಮ ಸಂವತ್ಸರದ ಶ್ರಾವಣ ಶು॥೫ ಆದಿವಾರದಲ್ಲು ಕಿ॥ ಕಲ್ಲೂರು ಸ್ಥಳದೊಳಗೆ ಇರುವ ಹಿರೇತಮ್ಮಣ್ಣ ಒಡೆಯರ ಕುಮಾರ ಲಿಂಗಣ್ಣ ಒಡೆಯರಿಗೆ ಸ್ವಗ್ರಾಮದ ಠಾಣಾದಾರ ಅಂಬಾಜಿ ಪಾತ್ರಾ ವ ಮುಜುಮದಾರ. ಗಿರಿಮಾಜಿ ಪಾತ್ರಾ ವ ಗೌಡ ಚೆನ್ನಬಸಪ್ಪ ವ ಚೆನ್ನಪ್ಪಗೌಡ ವ ಚನ್ನಿರಡ್ಡಿಗೌಡ ವ ಕುಲಕರ್ಣಿ ಕೃಷ್ಣಪ್ಪ ವ ಕು॥ ವೆಂಗಳಯ್ಯ ವ ನಾಡಗೌಡ ಬುಸ್ಸಯ್ಯ ವ ಬಾಟಿರಡ್ಡಿಗೌಡ ವ ಚಿಕ್ಕರಾಮಣ್ಣ ಗೌಡ ವ ಜಂಬಲಿಂಗಣ್ಣಗೌಡ ವ ಮೇಟಿಗೌಡರು ವ ಪಾಲಿಮ ಬಸಯ್ಯ ಮಜರೆಲಿ ವ ಮೇಟಿ ಕುಣಸೆ ಜಂಗೊಂಡ ವ ಸಿಂಗಿರಡ್ಡಿ ಬಾಸಯ್ಯ ವ ನಾಯಬರಡ್ಡಿ ಅಜಿವ ಅಕ್ಷಿಟ್ಟಿ ತಿಮ್ಮಣ್ಣಗೌಡ ವೊದಲಾದ ಸಮಸ್ತ ಪ್ರಜೆಗಳು ಬರೆದುಕೊಟ್ಟ ದಾನಪತ್ರದ ವಿವರ ಏಂತೆಂದೊಡೆ

ನೀವು ಪೂರ್ವದಲ್ಲಿ ಕರ್ನಾಟಕಕ್ಕೆ ಹೋಗಿ ನಾಲ್ಕೆಂಟು ವರ್ಷದ ಮೇಲೆ ಸಣ್ಣವರನ್ನು ಸಹವಾಗಿ ಕರೆದುಕೊಂಡು ಹೋಗಿದ್ದು ತಿರುಗಿ ಬಂದಿರಿ. ನೀವು ಬಂದ ಬಳಿಕ ಆ ವರ್ತಮಾನವನ್ನು ನಾವು ಹತ್ತು ಸಮಸ್ತರ । ಗೌಡ ಕು॥ ಅಪ್ಪಾದಾಸ

ಪ್ರಜೆಗಳು ತಿಳಿದವರು ಹತ್ತಕ್ಕೆ ಬೇಕಾದಂಥಾದ್ದು ಎಂದು ಮಾತನಾಡಿಕೊಂಡು ಗ್ರಾಮದ ಮೂಲಸ್ಥಾಪನದ ದೇವರು ಶ್ರೀ ಮಾರ್ಕಂಡೇಶ್ವರನ ಗುಡಿ ಅರ್ಚನಾಧಿಕಾರಕ್ಕೆ ಧಾರಾಪೂರ್ವಕ ಧಾರೆ ಎರೆದು ನಿಮ್ಮಗೆ ದಾನಪತ್ರ ಬರೆದುಕೊಟ್ಟು ಇದ್ದಿತು. ತರುವಾಯ ಗ್ರಾಮದ ಜೀಯರು ಕಲಾಪಗಳ ಎಬ್ಬಿಸಿ ದೇವರ ಹರಿವಾಣವ ಬೊಗಸೆ ತಮಗೆ ಬರಬೇಕು ತಾವು ದೇವರಿಗೆ ಎರಡು ಕೊಡ ನೀರು, ಪತ್ರಿಪುಷ್ಪ, ವ ಗುಡಿಯ ರಜವ ತೆಗೆಯಬೇಕು ಎಂದು ಊರು ಬಿಟ್ಟು ಹೊರಗೆ ಹೋಗಿ ಕುಳಿತುಕೊಂಡಿರುವಾಗ ನಾವು ಹತ್ತು ಹೋಗಿ ಆ ಜೀಯರಿಗೆ ಬುದ್ಧಿವಾದ ಹೇಳಿ ನೀವು ಗ್ರಾಮದಲ್ಲಿ ನಿಮ್ಮ ಜೀಯತನಮಾಡಿಕೊಂಡು ಸುಖದಲ್ಲಿ ಇರಬೇಕು ಮುಂದೆ ಶ್ರೀದೇವರಿಗೆ ನಿಮಗೆ ಕಾರಣ ಇಲ್ಲ ಎಂದು ಒಡಂಬಡಿಕೆ ಮಾಡಿ ಕೌಲುಕೊಟ್ಟು ಊರಿಗೆ ಕರೆದುಕೊಂಡು ಬಂದೆವು ಅದರ ಮ್ಯಾಲೆ ನೀವು ನಮ್ಮ ಬಳಿಗೆ ಬಂದು ಗ್ರಾಮದೊಳಗೆ ಇಂಥ ಕಲಾಪಗಳು ಆಗುತ್ತವೆ ಎಂದು ಹತ್ತಕ್ಕೆ ಹೇಳಲಾಗಿ ಅದರ ಮ್ಯಾಲೆ ನಾವು ಹತ್ತು ಅಷ್ಟದಶ ಪ್ರಜೆಗಳು ಕೂಡಿ ಮಾತನಾಡಿಕೊಂಡು ಶಾಶ್ವತವಾಗಿ ತಮ್ಮಗೆ ಶ್ರೀದೇವರ ಗುಡಿಯನ್ನು ಧಾರೆ ಎರೆದು ದಾನಪತ್ರವು ಮುಂದೆ ಆ ದೇವರ ಧೂಪ ದೀಪ ನೈವೇದ್ಯ ಸೇವೆ ಸತ್ಕಾರ ಪೂಜೆ ವಿಧಾನ ನಡೆವದಕ್ಕೆ ಮಾನ್ಯ ಕೈಲಿ ಬರದು ೨೦ ಇಕ್ಕೆಸದುಕೊಟ್ಟು ಇದ್ದೇವೆ. ಕಿರ್ದಿ ಮಡಿಕೆ ಮಾಗಿ ಮಾಡಿಕೊಂಡು ಅನುಭವಿಸಿಕೊಂಡು ಮುಂದೆ ಹರಿವಾಣ ವ ಬೊಗಸೆ ವ ಪಸಿಗೆ ಪಳಿಗೆ ಮಾಮೂಲು ವಿಶ್ವಿ ಇಷ್ಟನ್ನು ನಡತಿಮಾಡಿಕೊಟ್ಟು ಈವಿ ಸಕಳವನ್ನು ಸುಖದಿಂದ ಅನುಭವಿಸಿಕೊಂಡು ನಿಮ್ಮ ಪುತ್ರ ಪಾರಂಪರ್ಯ ಅನುಭವಿಸಿಕೊಂಡು ಇಹುದು ಈ ದೇವರ ಪೂಜೆ ನಿಮ್ಮ ದಾಯಾದಿಗಳಿಗೆ ಅಣ್ಣತಮ್ಮಂದಿರಿಗೆ ದಾರಿಗಾದರೂ ಸಂಮ್ಮಂಧವಿಲ್ಲವೆಂದು ಒಪ್ಪ ಬರೆದುಕೊಟ್ಟು ಇದ್ದೇವೆ ಈ ದೇವರ ವಿಷಯಕ್ಕೆ ಗೌಡ ಕುಲಕರ್ಣಿಗಳು ಬೇರೆ ಯಾರಾದರೂ ಕುಹಕ ಭಾವನೆಮಾಡಿದರೆ ಕಾಶಿಯಲ್ಲಿ ಗೋಹತ್ಯ ಬ್ರಹ್ಮಹತ್ಯ ಶಿಶುಹತ್ಯ ಮಾಡಿದ ಪಾಪಕ್ಕೆ ಅರ್ಹರು ಶಿವಾಚಾರ ಕುಲಾಚಾರಕ್ಕೆ ಹೊರ್ತು ಎಂದು ಒಪ್ಪಿ ಬರೆದುಕೊಟ್ಟ ದಾನಪತ್ರ

ಮೇಲೆ ನಿರೂಪಿಸಿದ ಸಮಸ್ತ ಅಷ್ಟಾದಶ ಪ್ರಜೆಗಳ
ಸ್ವಹಸ್ತಾಕ್ಷರ ಸಹಿಗಳಿವೆ
(ಮೂಲದಾನಪತ್ರದ ಆಧಾರದಿಂದ)

## ಪತ್ರ ೨

## ಶ್ರೀ ಗುರು ಪ್ರಸನ್ನ

ಶ್ರೀ ಶಾಲಿವಾಹನ ಶಾಖ ೧೫೩೩ ನೆಯ ವಿರೋಧಿ ವಿಕೃತಿ ನಾಮ ಸಂ||ದ ಶ್ರಾವಣ ಶು|| ೫ ಆದಿವಾರದಲ್ಲು ಶ್ರೀಮತ್ ಕ|| ಕಲ್ಲೂರ ಸ್ಥಳದ ಶ್ರೀ ಮಾರ್ಕಂಡೇಶ್ವರ ಪೂಜಾರ ಹಿರೇ ತಮ್ಮಯ್ಯನ ಮಗ ಲಿಂಗಣ್ಣವಡಿಯರಿಗೆ ಸ್ವಗ್ರಾಮದ ಗೌಡರು. ಹಳೇಜೋಳದ ಯಲ್ಲಪ್ಪಗೌಡ. ನಾಗಣ್ಣಗೌಡ. ಕರೆಣ್ಣಗೌಡ. ಲಿಂಗಣ್ಣಗೌಡರು ಇವರು ನಾಲ್ವರು ಒಂದು ಅಪಮೃತ್ಯದ ಮಾತಿಗಾಗಿ ಗ್ರಾಮವ ಬಿಟ್ಟುಹೋಗಿ ಇದ್ದರು ಮಧ್ಯಕಾಲದಲ್ಲು ರಾಜ ಶ್ರೀ ರಡ್ಡಿ ಗೌಡರು ಸರಿಮೇಟಿ ಅವರ ಉಪದ್ರಕ್ಕೆ ಲಚಮಣ್ಣ ತಿಮ್ಮಣ್ಣನು ಇವರ ಲಾಳಗೊಂಡರು ಇರಬಾರದು ಎಂದು ಇವರಿಗೆ ಬಹು ಕಷ್ಟಬಡಿಸಿದರು. ಸರಕಾರದ ಕಡೆಯಿಂದ ಬಂದವರಿಗೆ ಉಳಿಕೆ ನೀಡಿಸುವರು. ತುಪ್ಪದ ಕೊಡ ಇವರಕೈಲಿ ಕಿಲ್ಲೆ ರಾಯಚೂರಿಗೆ ಹೊರಿಸೋಣ ಈ ಪ್ರಕಾರ ಉಪದ್ರ ತಾಳಲಾರದೆ ಲಚಮಣ್ಣ ತಿಮ್ಮಣ್ಣನು ರಡ್ಡಿಯವರು ಕೊಡೋ ಉಪದ್ರಕ್ಕೆ ಮಧ್ಯಕಾಲದಲ್ಲಿ ಬಿಟ್ಟು ಬಳ್ಳಾರಿಯ ಸೀಮೆಯ ಹೊಳಗೆ ಇದ್ದಾರು. ತಮ್ಮ ಆರಾರೋಟಿ ಮಾಡಿವುಣ್ಣುತ್ತಿದ್ದರು. ಇವರ ಹೊಲದ ವಿವರವು - ಸೊಪ್ಪೇದೊಡ್ಡಿ - ಚಿಂತಾಚಾರಿಯ ಮನೆ ಹಿಂದಿನದು. ರಾಜಶ್ರೀ ಯಲ್ಲಪ್ಪ ಗೌಡನ ತಾಯಿ ಕೊಟ್ನೆಕಲ್ಲವರ ಮಗಳು ಅವರ ಸಂತತಿ ನಿಲ್ಲೊಷ್ಟಕ್ಕೆ ರಾಜಶ್ರೀ ಯಲ್ಲಪ್ಪಗೌಡನ ಹಿಡಕೊಂಡು ಇಲ್ಲೇದು ಅಲ್ಲೇದು ಎರಡೂ ಊರದ ಒಕ್ಕಲುತನ ಮಾಡಿಸುತ್ತಾ ಇದ್ದರು. ಪರಣ್ಣ ಸಂಗಣ್ಣನು ಮೂವರು ಕೂಡಿ ಯಲ್ಲಪ್ಪಗೌಡರಿಗೆ ಸುದ್ದಿ ಹೇಳಿಕಳಿಸಿದರು. ಸರಕಾರದ ಕಡೆಯಿಂದ ಬಂದವರು ಹೆಣ್ಣು ಮಗಳನ ನೋಡಿ ಸೈರಿಸಲಾರದೆ ಜುಲುಮಿಮಾಡಿ ಕುಲದೊಳಗೆ ಹಾಕಿಕೊಡಬೇಕಂತ ಲಗ್ನವಾದರೆ ನಿನ್ನ ಪಾಲಿಗೆ ಕೀರ್ತಿಬರೋಣವಿಲ್ಲವು ನೀನು

ಕೊಟ್ನೆಕಲ್ಲು ತಾಯಿ ಪದ್ದಿನ ಮೀರಿ ಲಗ್ನಮಾಡಿದರೆ ನಮ್ಮ ಸರಿಕರವಳಗೆ ಬಹು ತಾತ್ಸಾರ ಆದೀತು ನೀನು ಬಂದರೆ ನಮ್ಮ ಮೂವರ ಜನ ನೀನು ಬಂದ ಘಳಗೆ ಆ ವೂರವರು ಹೋಗೋಣವಾದೀತು ಎಂದು ಕಾಗದ ಬರೆದುಕೊಂಡು ಇದ್ದಾರು ಇವರು ನಮ್ಮ ಗರ್ಭದಲ್ಲಿ ಜನಿಸಿದ ಸುತರ ವಿವರವು ಇವರ ನಾಲ್ವರ ತೆರಿಗೆ ರೋಖ ರು ೧೨೦೦ ಸಾವಿರದಾ ಇನ್ನೂರು ಸುವ್ಯೆವಖ ಈ ಪ್ರಕಾರ ತೆತ್ತು ಇದ್ದಾರು ಪಸಿಗೆ ವ ಸೂವೆ ಸವರ್ತನೆಯು ಅಡದಿ ಸೀರೆ ಎಣ್ಣೆ ಈ ಪ್ರಕಾರ ರುಸುಮ ಉಂಟು ಹೊಲದ ನೂರಾಯಿಪ್ಪತ್ತು ಕೂರಿಗೆ ಹೊಲ ಹತ್ತು ಕೂರಿಗೆ ಇನಾಮತಿ ಹೊಲ ಇವರ ಕೊಂಡ ಜಾಗ ರಾಯಚೂರು ದಾರಿ ಬಾಲಬಂತೆ ಬದಿಲದು ಸೊಪ್ಪಿದೊಡ್ಡಿ ಸಮ್ಮತಿಗೆ ಅಮ್ಮಣ್ಣನ ಮನೆ ಹಿಂದಣದ್ದು ನಾಲ್ವರ ಬಣವೀ ದೊಡ್ಡಿ ಸಾಲು ಹಾರವರ ಮನೆ ಹಿಂದಾರಿನ ಬದರಿ ಸಾಲು ಮಾಡಿದ ದೊಡ್ಡಿ ವಿವರವು.

ಶ್ರೀಗುರು ಸಚ್ಚಿದಾನಂದ ರಾ||ರಾ||ಶ್ರೀ ಕೊ||ಕಲ್ಲೂರು ಹಿರೇತಮ್ಮಯ್ಯನ ಮಗ ಲಿಂಗಣ್ಣವಡಿಯರು ನಮ್ಮ ಮಕ್ಕಳ ತರ ಪಿಡಿ ಪಿಡಿಯಿರೋವರಿಗೆ ನಿಮಗೆ ಈ ಶಿಷ್ಯರ ವಿವರ ಬರೆದು ಇದ್ದೆವು ನಮ್ಮಣ್ಣ ತಮ್ಮಂದಿರು ಪೂರ್ವಕ್ಕೆ ಇನ್ನೂರಾನಲವತ್ತೆಂಟು ೨೪೮ ಶಿಷ್ಯರ ಮನೆಗಳು ಒಂದು ಮೇಟಿಗೆ ೬೨ ಈ ಪ್ರಕಾರ ನಿರ್ಣಯ ಆಗಿ ಇದ್ದಿತು ಹೀಗೆ ಮುಂದಿನ ಕಾಲದಲ್ಲಿ ಅಣ್ಣತಮ್ಮಂದಿರಿಗೆ ಕಲಾಪ ಮುಗಿಮವು ತಮ್ಮ ಬುದ್ಧಿವಂತಿಕೆಯಿಂದ ಗ೪೩ ಶಿಷ್ಯರು ........ನಮ್ಮ ಸ್ವತಂತ್ರ ಬರಕೊಂಡ...........

# ಹಬ್ಬ ಮತ್ತು ಉತ್ಸವಗಳು

ಪದ : ೫ : ಮಾರ್ಗಶಿರ ಶುದ್ಧ ಆರನೆಯ ತಿಥಿ ಸಂಪಾಷಷ್ಠೀ (ಸ್ಕಂದ ಷಷ್ಠೀ ಎಂದೂ ಇದನ್ನು ಕರೆಯುತ್ತಾರೆ). ಹೊಸ ಬೆಳೆಬಂದಾಗ ಆಚರಿಸುವ ಒಂದು ಸಂಪ್ರದಾಯ. ಹೊಸ ದಂಪತಿಗಳು ಹರಿವಾಣದಲ್ಲಿ ಮಣ್ಣುಹರವಿ ಜೋಳದ ಕಾಳು ಊರಿ ನೀರು ಹಾಕಿ ಮೂರು ದಿನ ಬಿಸಿಲಿಗೆ ಇಡುವರು. ಮೊಳಕೆ ಒಡೆಯುವವು. ಈ ಮೊಳಕೆಯಿಂದ ಮುಂದಿನ ವರ್ಷದ ಬೆಳೆಯ ಲಕ್ಷಣವನ್ನು ಕಂಡು ಹಿಡಿಯುವರು.

ಪಂಡಿತ ಚೆ.ವಿ. ಕವಲಿ ಅವರು ಇದಕ್ಕೆ 'ಚಂಪಾಷಷ್ಠೀ' ಎಂದೂ ಹೇಳಿ ಮಲ್ಲಾರಿ ದೇವರ ಉತ್ಸವವನ್ನು ಈ ದಿನ ಆಚರಿಸುತ್ತಾರೆಂದು ತಮ್ಮ 'ಭಾರತೀಯರ ಹಬ್ಬಗಳು' (ಪುಟ ೧೫೫ - ೧೬೦) ಪುಸ್ತಕದಲ್ಲಿ ವಿವರಿಸಿದ್ದಾರೆ.

ಪದ : ೮ : ಸಂಕ್ರಮಣದ ದಿನ ಮುತ್ತೈದೆಯರು ಹೊಸ ಮೊರದಲ್ಲಿ ಎಳ್ಳು, ಸಜ್ಜೆ, ಬದನೆ, ಕಡಲೆ ಮುಂತಾದ ವಸ್ತುಗಳನ್ನಿಟ್ಟು ಮುತ್ತೈದೆಯರಿಗೆ ಕೊಡುವರು. ಇದಕ್ಕೆ ಬಾಗಿನ ಕೊಡುವುದು ಎನ್ನುತ್ತಾರೆ. ಬಾಗಿನದಲ್ಲಿ ಚಳಿಯಿಂದಾಗುವ ದೋಷನಿವಾರಣೆಗೆ ಬೇಕಾಗುವ ವಸ್ತುಗಳನ್ನೇ ಇಟ್ಟಿರುತ್ತಾರೆ.

ಪದ : ೧೧ : ಸ್ನಾನಮಾಡಿ ಗಂಧ ಮೈಗೆ ಹಚ್ಚಿಕೊಳ್ಳುತ್ತಾರೆ. ಅರಿಶಿಣ ಮತ್ತು ಸುಣ್ಣ ನೀರಿನಲ್ಲಿ ಬೆರೆಸಿ ಹೆಣ್ಣುಮಕ್ಕಳು ಪರಸ್ಪರ ಅಂಗಾಲಿಗೆ ಹಚ್ಚಿಕೊಳ್ಳುವರು. ಇದಕ್ಕೆ ಕಾಲ್ಪರಿ ಎನ್ನುತ್ತಾರೆ. ಇದರಿಂದ ಗಂಡನ ಒಲುಮೆ ಹೆಚ್ಚಾಗುವುದೆಂಬ ನಂಬಿಕೆಯಿದೆ.

ಮಾಘಶುದ್ಧ ಸಪ್ತಮಿ ತಿಥಿಯನ್ನು ರಥಸಪ್ತಮಿ ಎನ್ನುತ್ತಾರೆ. ಸೂರ್ಯನ ಪೂಜೆಯೇ ಈ ದಿವಸದ ಮುಖ್ಯ ಆಚರಣೆ. ಅಂದು ಮನೆಯ ಮುಂದೆ ನೆಲವನ್ನು ಸಾರಿಸಿ ರಂಗವಲ್ಲಿಯನ್ನು ಹಾಕುತ್ತಾರೆ. ಮಧ್ಯದಲ್ಲಿ ದೊಡ್ಡದೊಂದು ಮಣೆಯನ್ನಿಟ್ಟು ಅದರ ಮೇಲೆ ಸಪ್ತಾಶ್ವರಥಾರೂಢನಾದ ಸೂರ್ಯ ಪ್ರತಿಮೆಯನ್ನು ರಕ್ತ ಚಂದನದಿಂದ ಚಿತ್ರಿಸುತ್ತಾರೆ. ಅದನ್ನು ಕೆಂಪು ಗಂಧ, ಕೆಂಪು ಹೂಗಳಿಂದ ಪೂಜಿಸುತ್ತಾರೆ. ಇದರ ಪಕ್ಕದಲ್ಲಿ ಒಲೆಹೂಡಿ ಅದರ ಮೇಲೆ ಹಾಲು ತುಂಬಿದ ಪಾತ್ರೆಯನ್ನಿಟ್ಟು ವಿಶೇಷವಾಗಿ ಕುರುಳು ಬೆಂಕಿಯಿಂದ ಹಾಲನ್ನು ಉಕ್ಕಿಸುತ್ತಾರೆ. ಅಂದು ಭುಜಗಳಲ್ಲಿ ಎರಡೆರಡು, ತಲೆಯಲ್ಲಿ ಮೂರು ಎಕ್ಕೆ ಎಲೆಗಳನ್ನಿಟ್ಟುಕೊಂಡು ಸ್ನಾನಮಾಡುವರು. ಸೂರ್ಯೋದಯದ ಮೊದಲು ಒಂದು ಗಳಿಗೆ (ಇಪ್ಪತ್ತು ನಾಲ್ಕು ನಿಮಿಷಗಳು) ಉದಯದ ಬಳಿಕ ಒಂದು ಗಳಿಗೆ - ಈ ಮಧ್ಯದಲ್ಲಿ ಮಾಡುವ ಸ್ನಾನಕ್ಕೆ ಮಾಘಸ್ನಾನವೆನ್ನುತ್ತಾರೆ. ಇದರಿಂದ ಅಮೃತ ಸ್ನಾನದ ಪುಣ್ಯ ಬರುತ್ತದೆಂದು ನಂಬಿಕೆಯಿದೆ. ಅಂದು ಪಿತೃಗಳಿಗೆ ತರ್ಪಣ ಕೊಡುವರು.

ಮಾಘಶುದ್ಧ ಚತುರ್ದಶಿ ದಿನ ಕೂಷ್ಮಾಂಡದಾನಃ ಬೂದುಕೂಂಬಳ ಕಾಯಿಗೆ ಸ್ತ್ರೀವೇಷ ಬರೆದು ಅಲಂಕರಿಸಿ ಸತಿಪತಿಗಳು ಮುತ್ತೈದೆಯರಿಗೆ ದಾನಮಾಡುವರು. (ಮಕ್ಕಳಿಲ್ಲದವರಿಗೆ ಕೊಟ್ಟರೆ ಮಕ್ಕಳಾಗುವವೆಂಬ ನಂಬಿಕೆಯಿದೆ.)

ಪದ : ೧೪ : ಭಾರತದಲ್ಲಿ ಕಾಮದಹನ ಎಲ್ಲ ಪ್ರದೇಶಗಳಲ್ಲಿ ಆಚರಿಸಲಾಗುತ್ತಿದೆ. ಫಾಲ್ಗುಣ ಶುದ್ಧ ಹುಣ್ಣಿಮೆಯ ದಿನ ಕಾಮನನ್ನು ಸುಡುವರು. ಈ ಹುಣ್ಣಿಮೆಗೆ ಹೋಳಿ ಹುಣ್ಣಿವೆ. ಕಾಮನ ಹುಣ್ಣಿವೆ ಮತ್ತು ವಸಂತ ಪೌರ್ಣಿಮಾ ಎಂಬ ಹೆಸರುಗಳಿವೆ. ಮರುದಿನ ಬಣ್ಣದಾಟ. ಕೆಲವು ಕಡೆ ಬಣ್ಣದ ಪುಡಿಯನ್ನು ಉಗ್ಗುತ್ತಾರೆ ಮತ್ತು ಮೋರೆಗೆ ಹಚ್ಚುತ್ತಾರೆ. ಕೆಲವು ಕಡೆ ಬಣ್ಣದ ನೀರನ್ನು ಒಬ್ಬರಿಗೊಬ್ಬರು ಮೈಮೇಲೆ ಎರಚಾಡುತ್ತಾರೆ ಮತ್ತು ಜೀರ್ಕೊಳವಿಯಿಂದ ಚಿಮ್ಮುತ್ತಾರೆ. ಇದು ಬಣ್ಣದ ಮತ್ತು ಅತ್ಯಂತ ಉಲ್ಹಾಸದ ಸರ್ವರ ರಂಜನೀಯ ಹಬ್ಬ. ಈ ಹಬ್ಬ ಜನರ ಉದ್ವೇಗಗಳನ್ನು, ಮಾನಸಿಕ ತುಮುಲ ಮತ್ತು ಜಾಡ್ಯಗಳನ್ನು ಕಳೆದು ಮೈಚಳಿಬಿಡಿಸಿ ಅತ್ಯಂತ ಸಂತೋಷವನ್ನು ತಂದುಕೊಡುತ್ತದೆ. ಅನೇಕ ಕಡೆ ಕಾಮನನ್ನು ಸುಟ್ಟ ಬೂದಿಯನ್ನು ಮೈಗೆ ಹಚ್ಚಿಕೊಳ್ಳುತ್ತಾರೆ ಮತ್ತು ಅದನ್ನು ಒಬ್ಬರ ಮೇಲೊಬ್ಬರು ಚೆಲ್ಲಾಡುತ್ತಾರೆ.

ಇಂದು ಗೋವಿಂದನ ಪೂಜೆಯನ್ನು ಬಹು ಪ್ರೀತಿಯಿಂದ ಮಾಡುವರು.

ಪದ : ೧೭ : ಚೈತ್ರಮಾಸ ಸಂತೋಷದ ಮತ್ತು ಉತ್ಸಾಹದ ಮಾಸ. ವಸಂತನ ಬರುವಿಕೆಯಿಂದ ಮಣ್ಣು ಚಿಗುರುವುದು. ದಾರಿ ದಾರಿಗಳಲ್ಲಿ ಅನ್ನಛತ್ರ ಮತ್ತು ಅರವಂಟಿಗೆಗಳನ್ನು ಕಾಣಬಹುದು. ವಿಶೇಷವಾಗಿ ಚೈತ್ರದಲ್ಲಿ ಹೆಣ್ಣುಮಕ್ಕಳು ಸವಿಗೋಲ (ಕಬ್ಬು)ಗಳನ್ನು ದಾನಮಾಡುತ್ತಾರೆ.

ಪದ : ೨೦ : ವೈಶಾಖದಲ್ಲಿ ಅಕ್ಷಯ ತೃತೀಯ ದಿನ ಪಿತೃ ತರ್ಪಣದ ದಿನ. ಬೆಲ್ಲದ ಹೋಳಿಗೆ ಮಾಡಿ ಬ್ರಾಹ್ಮಣರಿಗೆ ಉಣಿಸುವರು. ಈ ಮಾಸದಲ್ಲಿ ಕಂಚಿನ ಪಾತ್ರೆಯಲ್ಲಿ ಮೊಸರನ್ನು ದಾನಮಾಡುತ್ತಾರೆ. ಕಂಚಿನ ಪಾತ್ರೆಯಲ್ಲಿ ದಾನಮಾಡಿದರೆ ವಿಶೇಷ ಪುಣ್ಯ ಬರುವುದೆಂದು ವಾಡಿಕೆಯಿದೆ.

ಪದ : ೨೩ : ಜೇಷ್ಠಶುದ್ಧ ಹುಣ್ಣಿವೆಗೆ ಕಾರಹುಣ್ಣಿವೆ ಎಂದು ಹೆಸರು. ಆಗ ಮುಂಗಾರು ಪ್ರಾರಂಭವಾಗಿರುತ್ತದೆ. ಆದುದರಿಂದ ಒಕ್ಕಲಿಗರಿಗೆ ಈ ಕಾರಹುಣ್ಣಿವೆ ಬಹು ಮಹತ್ವದ ಹುಣ್ಣಿವೆ. ಅಂದು ಎತ್ತುಗಳನ್ನು ಅಲಂಕಾರಮಾಡಿ ಪೂಜಿಸುತ್ತಾರೆ. ಸಾಯಂಕಾಲ ಕರಿ ಹರಿಯುತ್ತಾರೆ. ಕರ್ನಾಟಕದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕದಲ್ಲಿ ಕಾರಹುಣ್ಣಿವೆಯ ಹಬ್ಬವನ್ನು ವೈವಿಧ್ಯಮಯವಾಗಿ ಮತ್ತು ವಿಶಿಷ್ಟವಾಗಿ ಆಚರಿಸುತ್ತಾರೆ.

ಜೇಷ್ಠ ಬಹುಳ ಅಮವಾಸ್ಯೆಗೆ ಮಣ್ಣೆತ್ತಿನ ಅಮವಾಸ್ಯ ಎನ್ನುತ್ತಾರೆ. ಈ ದಿನ ಮಣ್ಣಿನಿಂದ ಎತ್ತುಗಳನ್ನು ಮಾಡಿ ಅಲಂಕರಿಸಿ ಪೂಜಿಸಿ ಅವುಗಳ ಮೆರವಣಿಗೆ ಮಾಡುತ್ತಾರೆ. ಇದು ಒಂದು ಒಕ್ಕಲಿಗರಿಗೆ ಸಂಭ್ರಮದ ಹಬ್ಬವೇ.

ಪದ : ೨೬ : ಆಷಾಢ ಶುದ್ಧ ಏಕಾದಶಿಗೆ ಪ್ರಥಮೈಕಾದಶಿ ಮತ್ತು ವಾಮನ ಏಕಾದಶೀ ಎನ್ನುತ್ತಾರೆ. ಅಂದು ಹಗಲು ರಾತ್ರಿ ೨೪ ತಾಸು ಉಪವಾಸ ಮಾಡುತ್ತಾರೆ ಮತ್ತು ರಾತ್ರಿ ಜಾಗರಣೆ ಮಾಡುತ್ತಾರೆ.

ಪದ : ೨೯ : ಶ್ರಾವಣ ಮಾಸವು ಸರ್ವರಿಗೆ ಪವಿತ್ರ ಮಾಸವು. ಶ್ರಾವಣ ಶುದ್ಧ ಚೌತಿ ಮತ್ತು ಪಂಚಮಿಯಂದು ನಾಗಪ್ಪನಿಗೆ ಹಾಲೆರೆಯುವರು. ಚೌತಿಯ ದಿನ ಸ್ತ್ರೀಯರು ಮತ್ತು ಪಂಚಮಿಯ ದಿನ ಪುರುಷರು ನಾಗಪ್ಪನಿಗೆ ಹಾಲೆರೆಯುವರು. ಅಲ್ಲದೆ ಗರುಡ ಪಂಚಮಿಯ ದಿನ ಪುರುಷರು ಗರುಡನ ಪೂಜೆ ಮಾಡುವರು.

ಶ್ರಾವಣ ಮಾಸ ಕೃಷ್ಣಪಕ್ಷದ ಅಷ್ಟಮಿಗೆ ಗೋಕುಲಾಷ್ಟಮಿ ಎಂದು ಹೆಸರು. ಅಂದು ಮಧ್ಯರಾತ್ರಿ ಶ್ರೀಕೃಷ್ಣನ ಜನನ.

ಶ್ರಾವಣಶುದ್ಧ ಮತ್ತು ಬಹುಳದ ಎಲ್ಲ ಸೋಮವಾರಗಳಂದು ಶಿವನಿಗೆ ಅಭಿಷೇಕಮಾಡಿ ಬಿಲ್ವಪತ್ರಿಯನ್ನೇರಿಸುವರು.

ಪದ : ೩೨ : ಗಂಡು ಮತ್ತು ಹೆಣ್ಣು ದಾರವನ್ನು ಬಲರಟ್ಟೆ ಮತ್ತು ಕೊರಳಿಗೆ ಕಟ್ಟಿಕೊಳ್ಳುವರು. ಭಾದ್ರಪದ ಶುದ್ಧ ನೌಮಿಯಿಂದ

ಮಹಾನೌಮಿಯವರೆಗೆ ಈ ದಾರ ಇರುವದು. ಇದಕ್ಕೆ ಅನಂತನೋಂಪಿ ಎಂದು ಕರೆಯುತ್ತಾರೆ. ಇದರ ಆಚರಣೆ ವಿವರ ಹೀಗಿದೆ:

ತಾಮ್ರದ ತಂಬಿಗೆಯಲ್ಲಿ ಮಡಿನೀರನ್ನು ತಂದು ವಸ್ತ್ರವನ್ನು ಸುತ್ತಿ ಮೇಲೆ ದರ್ಭೆಯ ಶೇಷವನ್ನು ಇಟ್ಟು, ಷೋಡಶೋಪಚಾರದಿಂದ ಪೂಜೆ ಮಾಡಬೇಕು. ಆ ಕಾಲಕ್ಕೆ ೧೪ ಗಂಟುಗಳ ಕೆಂಪು ದಾರವನ್ನು ಬಲಗೈಗೆ ಕಟ್ಟಿಕೊಳ್ಳಬೇಕು. ಪೂಜೆ, ಪಕ್ವಾನ್ನನೈವೇದ್ಯ ಬ್ರಾಹ್ಮಣದಾನ ಭೋಜನಗಳು ನಡೆಯಬೇಕು. (ಭಾರತೀಯರ ಹಬ್ಬಗಳು, ಪುಟ ೧೨೭)

ಭಾದ್ರಪದ ಶುದ್ಧ ಚೌತಿ ಗಣೇಶ ಚೌತಿ. ಅಂದು ಗಣೇಶನನ್ನು ಕೂಡಿಸುವರು. ಭಾದ್ರಪದ ಬಹುಳ ಹದಿನೈದು ದಿವಸ ಪಿತೃಪಕ್ಷ. ಮಹಾಲಯ ಅಮಾವಾಸ್ಯೆಯವರೆಗೆ ಎಲ್ಲ ಪಿತೃಗಳಿಗೆ ಶ್ರಾದ್ಧಮಾಡುವರು.

ಪದ : ೩೫ : ಆಶ್ವೀಜ ಬಹುಳ ದ್ವಾದಶಿಯಿಂದ ಕಾರ್ತೀಕ ಶುದ್ಧ ಪೌರ್ಣಿಮೆಯವರೆಗೆ ಆಕಾಶಬುಟ್ಟಿಗಳನ್ನು ಕಟ್ಟುವರು. ಈ ಬೆಳಕಿನಲ್ಲಿ ಪಿತೃಗಳು ಆರೋಗ್ಯ, ಆಯುಷ್ಯ, ಸಂತತಿ, ಸಾಭಾಗ್ಯಗಳನ್ನು ತೆಗೆದುಕೊಂಡು ಭೂಮಿಗೆ ಇಳಿಯುವರು. ಅವರು ಹೋಗುವಾಗ ಉಲ್ಕಾದರ್ಶನಮಾಡುವರು. ದೊಡ್ಡಮನೆಗಳಮೇಲೆ ಎತ್ತರದಲ್ಲಿ ಹಿಲಾಲುಗಳನ್ನು ಹಚ್ಚುವರು. ಈ ಬೆಳಕಿನಲ್ಲಿ ಪಿತೃಗಳು ದೇವಲೋಕಕ್ಕೆ ಹೋಗುವರು. ಇತ್ತೀಚೆಗೆ ಮನೆಗಳ ಮೇಲೆ ಹಿಲಾಲು ಹಚ್ಚುವದು ನಿಂತುಹೋಗಿ ಊರಹೊರಗಿನ ಗಿಡದ ಮೇಲೆ ಕೊಳ್ಳಿಹಚ್ಚುವರು.

ಆಶ್ವೀಜ ಬಹುಳ ಚತುರ್ದಶಿಯು ನರಕ ಚತುರ್ದಶಿ.

ಪದ : ೩೮ : ಕಾರ್ತಿಕ ಶುದ್ಧ ಪಾಡ್ಯಕ್ಕೆ ಬಲಿಪಾಡ್ಯವೆಂದು ಹೆಸರು. ಈ ದಿವಸ ವಿಷ್ಣು ವಾಮನಾವತಾರದಿಂದ ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಅಟ್ಟಿದ ಪೌರಾಣಿಕ ಕಥೆ ಪ್ರಸಿದ್ಧವಾಗಿದೆ. ಕಾರ್ತಿಕ ಶುದ್ಧ ಬಿದಿಗೆಯ ದಿನ ಯಮನು ತನ್ನ ತಂಗಿ ಯಮುನೆಯ ಮನೆಗೆ ಹೋಗಿ ಊಟಮಾಡಿ ಸತ್ಕಾರಗೊಂಡ ದಿನ. ಪ್ರತಿವರ್ಷ ಇದೇ ದಿನ ತಂಗಿಯ ಮನೆಗೆ ಬರುವದಾಗಿ ವಚನಕೊಟ್ಟ. ಇದರ

ಸ್ಮಾರಕವಾಗಿ ಕಾರ್ತಿಕ ಶುದ್ಧ ಬಿದಿಗೆಯ ದಿನ ಅಕ್ಕ ತಂಗಿಯರ ಮನೆಗೆ ಅಣ್ಣತಮ್ಮಂದಿರು ಹೋಗಿ ಊಟಮಾಡಿ ಸಂತೋಷ ಪಡುವರು.

ಕಾರ್ತಿಕ ಶುದ್ಧ ಚೌತಿಯ ದಿನ ನೆಲ್ಲಿಗಿಡಗಳ ಕೆಳಗೆ ಲಕ್ಷ್ಮೀ ಪೂಜೆಮಾಡುವರು. ಇದಕ್ಕೆ ಕ್ಷೀರಾಬ್ಧಿಯರ್ಚನೆಯೆನ್ನುವರು.

ಕಾರ್ತಿಕ ಶುದ್ಧ ದ್ವಾದಶಿಯ ದಿನ ದೇವರು ಏಳುವರು. ಅದಕ್ಕೆ ಉತ್ಥಾನ ದ್ವಾದಶಿಯೆನ್ನುವರು. ಆಷಾಢ ಶುದ್ಧ ಏಕಾದಶಿಯ ದಿವಸ ವಿಶ್ರಾಂತಿಗಾಗಿ ಶೇಷಶಾಯಿಯಾದ ವಿಷ್ಣು ಇಂದು ಏಳುತ್ತಾನೆ. ಅದೇ ದಿನ ತುಲಸೀ ಲಗ್ನಮಾಡುವರು.

## ಶ್ಲೋಕ ೧೮ : ದಂಪತಿ ವೃಕ್ಷಗಳು

ಆಲ, ಅರಳಿ, ಬಸರೆ - ಈ ಮೂರರಲ್ಲಿ ಯಾವುದಾದರೂ ಒಂದು ಗಿಡದ ಜೊತೆಗೆ ಬೇವಿನಗಿಡವನ್ನು ಬೆಳೆಸುತ್ತಾರೆ. ಆಗ ಇದಕ್ಕೆ ಅಶ್ವತ್ಥವೃಕ್ಷವೆಂದು ಹೆಸರು ಬರುತ್ತದೆ. ಹೆಚ್ಚಾಗಿ ಬೇವಿನಗಿಡದ ಜೊತೆಗೆ ಆಲದಗಿಡವನ್ನು ಬೆಳಿಸುವ ರೂಢಿಯಿದೆ. ಬೇವಿನಗಿಡ ಹೆಣ್ಣೆಂದು, ಆಲ, ಅರಳಿ, ಬಸರೆ ಗಿಡಗಳು ಗಂಡೆಂದು ಹಿಂದಿನಿಂದಲೂ ಜನರಲ್ಲಿ ಬೆಳೆದುಬಂದ ನಂಬುಗೆ. ಕೂಡಿ ಬೆಳೆದ ಈ ವೃಕ್ಷಗಳಿಗೆ ಅಶ್ವತ್ಥವೃಕ್ಷವಲ್ಲದೆ ದಂಪತಿ ವೃಕ್ಷಗಳೆಂದೂ ಹೆಸರು. ದೇವರ ಗುಡಿ ವಿಶೇಷವಾಗಿ ಹನುಮಂತ ದೇವರ ಗುಡಿಯ ಮುಂದೆ ಈ ದಂಪತಿ ವೃಕ್ಷಗಳನ್ನು ಬೆಳೆಸಿ ಸುತ್ತಕಟ್ಟೆಕಟ್ಟುತ್ತಾರೆ; ಅದಕ್ಕೆ ಅಶ್ವತ್ಥ ಕಟ್ಟೆಯೆಂದು ಕರೆಯುತ್ತಾರೆ. ಮದುವೆಗೆ ಮೊದಲು ಅಶ್ವತ್ಥವೃಕ್ಷವನ್ನು ಪೂಜಿಸುವ ಸಂಪ್ರದಾಯವಿದೆ.

"ಆಲಗಂಬ (ಹಾಲಗಂಬ) ತರುವುದೊಂದು ಮದುವೆಯಲ್ಲಿ ವಿಶೇಷ ಆಚರಣೆ. ಮದುವೆಯ ಮೊದಲು ಊರಿನ ದೇವಾಲಯದ ಮುಂದಿದ್ದ ಆಲ ಬೇವಿನ ಮರಕ್ಕೆ ದಂಪತಿಗಳೀರ್ವರೂ ಮುತ್ತೈದೆಯರ ಜೊತೆ ಊದಿಸುತ್ತ ಬಾರಿಸುತ್ತ ಹೋಗಿ ಆ ಮರಗಳನ್ನು ಪೂಜಿಸಿ, ಅಕ್ಷತೆಹಾಕಿ, ಆಲದ ಮರದ

ಟೊಂಗೆಯೊಂದನ್ನು ಗೌರವದೊಂದಿಗೆ ಮದುವೆಮನೆಗೆ ತರುತ್ತಾರೆ. ಅದನ್ನು ಮದುವೆಯ ಹಂದರದಲ್ಲಿ ಒಂದು ಕಂಬಕ್ಕೆ ಪ್ರತಿಷ್ಠಾಪಿಸಿ ಪೂಜಿಸುತ್ತಾರೆ. ಅನಂತರವೇ ವಧುವರರ ಅಕ್ಷತೆ. ಆಲದ ವಂಶದಂತೆ ಈ ಮದುಮಕ್ಕಳ ವಂಶವು ಹಾಲ್ದುಂಬಿ ಸದಾ ಬಿಳಲು ಬಿಡುತ್ತಾ ಬೆಳೆಯಲಿ ಎನ್ನುವ ಆಕಾಂಕ್ಷೆ. ಇದನ್ನು ಕೆಲವೇ ಧರ್ಮದ ಜನರ ಮದುವೆಯಲ್ಲಿ ಆಚರಿಸುತ್ತಾರೆ. ಕೆಲವು ಕಡೆ ಆಲಕ್ಕೆ ಬದಲಾಗಿ ಕಳ್ಳಿಯನ್ನು ಬಳಸುವ ರೂಢಿಯಿದೆ. ಅದೂ ಹಾಲು ತುಂಬಿ ಬಿದ್ದಲ್ಲೇ ಬೆಗಿಯುವ ಗುಣವುಳ್ಳದ್ದು."

(ಡಾ. ಮ.ಗು. ಬಿರಾದಾರ : ಜಾನಪದ
ಜೀವಾಳ. ಪುಟ ೧೦೫)

## ಬಲಾರಣ್ಯ

ವಿಂಧ್ಯಪರ್ವತದಿಂದ ಗೋದಾವರಿವರೆಗಿರುವ ಅರಣ್ಯವೇ ಬಲಾರಣ್ಯ. ವಿಂಧ್ಯದಿಂದ ಪ್ರಾರಂಭವಾಗಿ ಮಧ್ಯಪ್ರದೇಶದ ಜಬ್ಬಲ್‌ಪುರ (ಅಮರ ಕಂಟಕ). ಇಟಾರ್ಸಿ ಮುಂತಾದ ಪ್ರದೇಶಗಳನ್ನು ಹಾದು ದಕ್ಷಿಣದಲ್ಲಿ ನಾಸಿಕದ ತ್ರ್ಯಂಬಕೇಶ್ವರ ದೇವಾಲಯದ ಸಮೀಪ ಗೋದಾವರಿ ಹುಟ್ಟುವ ಸ್ಥಳದವರೆಗೆ - ಈ ಅರ[illegible] ವ್ಯಾಪಿಸಿದೆ. ಮಧ್ಯಪ್ರದೇಶದಲ್ಲಿ ಹಬ್ಬಿದ ಈ ಅರಣ್ಯ ದಕ್ಷಿಣದಲ್ಲಿ ದ್ವಾರಕೆ (ಗುಜರಾತ್) ಹತ್ತಿರವಾಗುತ್ತದೆ.

(ರಾಮಾಯಣ. ಮಹಾಭಾರತ. (ಅರಣ್ಯ ಪರ್ವ). ಭಾಗವತ. ಭವಿಷ್ಯೋತ್ತರ ಪುರಾಣಗಳಲ್ಲಿ ಬಲಾರಣ್ಯದ ಉಲ್ಲೇಖವಿದೆ)

## ದ್ವಾರಕಾ

ಇದು ಅನರ್ತ ದೇಶಕ್ಕೆ ರಾಜಧಾನಿಯಾಗಿತ್ತು. ಶ್ರೀಕೃಷ್ಣ ಯಾದವರೊಂದಿಗೆ ಈ ಪಟ್ಟಣದಲ್ಲಿ ವಾಸವಾಗಿದ್ದ. ಜರಾಸಂಧ ಕೃಷ್ಣನ ಮೇಲೆ ಪದೇ ಪದೇ ದಂಡೆತ್ತಿಹೋಗಿ ಪೀಡಿಸುತ್ತಿದ್ದ ಕಾರಣ ಕೃಷ್ಣ ವಿಶ್ವಕರ್ಮನಿಂದ ಈ

ಪಟ್ಟಣವನ್ನು ಸಮುದ್ರ ಮಧ್ಯದಲ್ಲಿ ನಿರ್ಮಿಸಿದ (ಹರಿವಂಶ - ೨- ೫೮, ಭಾಗವತ - ೧೦ - ೫೦)

## ವೈದಿಕ ಬೌದ್ಧಾವತಾರ

ಈ ಬುದ್ಧ ಶುದ್ಧೋದನ ಬುದ್ಧನಲ್ಲ. ಈತ ವೈದಿಕ ಬುದ್ಧ; ಶುದ್ಧೋದನ ಬುದ್ಧನಿಗಿಂತ ಪೂರ್ವದವನು. ಈತನಿಗೂ ಆತನಿಗೂ ಏನೂ ಸಂಬಂಧವಿಲ್ಲ. ಇಬ್ಬರೂ ಬೇರೆ ಬೇರೆ. ಆಶ್ವಿಜ ಶು|| ತ್ರಯೋದಶಿಯ ದಿನ ಈತನ ಜನನ.

ಕಮಲಾಕ್ಷ, ಸರೋಜಾಕ್ಷ ಮತ್ತು ವಿಲೋಮ್ರಾಕ್ಷ ಎಂಬ ಮೂವರು ರಾಕ್ಷಸರು ಬ್ರಹ್ಮದೇವನಿಂದ ಅವಧ್ಯರೆಂಬ ವರವನ್ನು ಪಡೆದರು. ಆದುದರಿಂದ ಇವರ ಉಪಟಳ ಹೆಚ್ಚಾಗಿ ಸರ್ವಲೋಕಗಳು ತಲ್ಲಣಿಸಿದವು. ದಿನಗಳೆದಂತೆ ಇವರ ಹಿಂಸೆ ವಿಪರೀತವಾಯಿತು. ದೇವತೆಗಳು ಬ್ರಹ್ಮನ ಮೊರೆಹೊಕ್ಕರು. "ನಾನು ಆ ವರವನ್ನು ಕೊಟ್ಟಿದ್ದೇನೆ; ಮರಳಿ ಪಡೆಯಲು ಆಗುವದಿಲ್ಲ. ನೀವು ವಿಷ್ಣುವಿನ ಮೊರೆಹೋಗಿರಿ" ಎಂದನು ಬ್ರಹ್ಮ. ದೇವತೆಗಳು ವಿಷ್ಣುವಿನ ಮೊರೆಹೊಕ್ಕು ಪ್ರಾರ್ಥಿಸಿದರು. ಆಗ ವಿಷ್ಣು ಬೌದ್ಧಾವತಾರ ತಾಳಿದ.

ಇಲ್ಲಿ ವಿಶೇಷವಾದ ವಿಷಯವೊಂದಿದೆ. ಆ ಮೂವರು ರಕ್ಕಸರ ಸತಿಯರು ಪಾತಿವ್ರತ್ಯದಲ್ಲಿ ಹೆಸರಾದವರು. ಅವರ ಆ ಬಲವೇ ರಕ್ಕಸರಿಗೆ ಹೆಚ್ಚಿನ ಬಲವನ್ನು ನೀಡಿತ್ತು. ಅವರ ಪಾತಿವ್ರತ್ಯ ಭಂಗವಾದರೆ ಮಾತ್ರ ಆ ರಕ್ಕಸರಿಗೆ ಮರಣವಿತ್ತು. ಬೌದ್ಧ ಇದನ್ನೇ ಮಾಡಿದ.

ವಿಷ್ಣು ಮರ್ತ್ಯದಲ್ಲಿ ದ್ವಾಪರದ ಕೊನೆಯಲ್ಲಿ ಹುಟ್ಟಿದ. ಹುಟ್ಟಿದಾಗಲೇ ಅವನಿಗೆ ಹಲ್ಲುಗಳಿದ್ದವು. ಆ ಮಗು ಮಾತಾಡುತ್ತಿತ್ತು; ನಗುತ್ತಿತ್ತು; ಉಪದೇಶ ಮಾಡುತ್ತಿತ್ತು. ಇದು ಅಪಶಕುನದ ಕೂಸೆಂದು ಭಯಗೊಂಡು ತಂದೆ ತಾಯಿಗಳು ಅದನ್ನು ತಿಪ್ಪೆಯ ಮೇಲೆ ಒಗೆದರು. ಜನರು ಆ ಕೂಸಿಗೆ ಕಲ್ಲಿನಿಂದ ಹೊಡೆದರು. ಆ ಮಗುವಿಗೆ ಏನೂ ಆಗದೇ ಅದು ನಕ್ಕು ಉಪದೇಶ ಮಾಡುತ್ತಿತ್ತು. ನಾನೇ ದೇವರೆಂದು ಹೇಳುತ್ತಿತ್ತು. ಜನರೆಲ್ಲ ಆ ಕೂಸನ್ನು ಕೊಲ್ಲಲು ಪ್ರಯತ್ನಿಸಿದರು. ಅದು ಸಾಯಲಿಲ್ಲ. ಯಾವನೋ ಒಬ್ಬ ಚಕ್ರವನ್ನು ತಂದು ಅದನ್ನು ಆ ಕೂಸಿನ

ಮೇಲೆ ಪ್ರಯೋಗಿಸಿದ. ಕೂಸು ಆ ಚಕ್ರದ ಮೇಲೆ ಕುಳಿತು ಬೆಳೆಯಿತು; ತತ್ವೋಪದೇಶ ಮಾಡಿತು.

ಆ ಕೂಸು ಹನ್ನೆರಡು ವರ್ಷದ ಸುಂದರ ಬಾಲಕನಾಗಿ ಬೆಳೆದನು. ಅವನ ತಲೆಯ ಹಿಂದೆ ಚಕ್ರವಿತ್ತು. ಆ ಬಾಲಕ ಆ ಮೂವರು ರಕ್ಕಸರ ಹೆಂಡಂದಿರ ಮುಂದೆ ಬೆತ್ತಲೆ ಸುಳಿದಾಡಿದ. ರಕ್ಕಸರ ಕುರೂಪ ಮತ್ತು ಭೀಕರ ಕಾಯವನ್ನು ಯಾವಾಗಲೂ ನೋಡುತ್ತಿದ್ದ ಆ ಸತಿಯರ ಮನಸ್ಸು ಈ ಸುಂದರ ಬಾಲಕನ ಸೌಂದರ್ಯಕ್ಕೆ ಸೋತಿತು. ಇದರಿಂದ ಅವರ ಪಾತಿವ್ರತ್ಯ ನಷ್ಟವಾಯಿತು; ರಕ್ಕಸರು ವಧೆಯಾದರು.

(ಪದ್ಮಪುರಾಣ, ಸ್ಕಂದ ಪುರಾಣ, ಬ್ರಹ್ಮವೈವರ್ತ, ಭಾಗವತ ಮುಂತಾದ ಪುರಾಣಗಳಲ್ಲಿ ಈ ಬೌದ್ಧಾವತಾರದ ಉಲ್ಲೇಖವಿದೆ)

ಜನಪದ ಸಾಹಿತ್ಯದಲ್ಲಿ ವೈದಿಕ ಬುದ್ಧನ ಚರಿತ್ರೆ ದೊರಕುತ್ತದೆ. ಹತ್ತು ಅವತಾರಗಳಿಗೆ ಹತ್ತು ಪದ್ಯಗಳನ್ನು ಬರೆದು ಅವುಗಳ ಕೆಳಗೆ ಪ್ರವಚನದ ಗದ್ಯ ಬರೆದು ಅವತಾರವನ್ನು ವಿಸ್ತಾರವಾಗಿ ಹೇಳಲಾಗಿದೆ.

ಅಂಬರವನು ಪೊಕ್ಕು ಜಗವ ಮೋಹಿಸುವ ಕ
ದಂಬರಿಯರೇ ಕೇಳಿರೇ, ಅಂಬುಜಮುಖಿಯರ ವ್ರತವ ಕೆಡಿಸಿದ
ದಿಗಂಬರ ಬೌದ್ಧಕಾಣಮ್ಮ

ಒಂಬತ್ತನೆಯ ಅವತಾರಕ್ಕೆ ತಾಯಿತಂದೆ ಗುರು ಮತ್ತು ಕ್ಷೇತ್ರದಾವುದೆಂದಡೆ - ತಾಯಿ ನಿಗಳಾವತಿ, ತಂದೆ ಹುಂಮ್ರಕಾಳಿ, ಗುರು ಕಶ್ಯಪ ಬ್ರಹ್ಮ, ಕ್ಷೇತ್ರದಾವುದೆಂದಡೆ ತ್ರಿಪುರ ಪಟ್ಟಣದಲ್ಲಿ ನಿಂದು ಪತಿವ್ರತವ ಕೆಡಿಸಿದ ಶ್ರೀಮನ್ ನಾರಾಯಣ.

ಹನ್ನೊಂದನೆಯ ಕೊನೆಯ ನುಡಿಯಲ್ಲಿ ಕವಿ 'ಪೆಂಬಾಳಾದಿಕೇಶವ' ಎಂಬ ಅಂಕಿತ ಹೇಳುತ್ತಾನೆ. ಪೆಂಬಾಳ ಎಂಬುದು ಊರು ಇರಬೇಕು.

(ಶ್ರೀ ರಾಮಸ್ವಾಮಿ ನುಲಿಯವರಲ್ಲಿರುವ ಹಸ್ತಪ್ರತಿಯಿಂದ ಸಂಗ್ರಹಿಸಿದ್ದು)

## ಬುದ್ಧ

ಭಗವಂತನ ಒಂಬತ್ತನೆಯ ಅವತಾರ. ಕಲಿಯುಗದ ಆದಿಯಲ್ಲಿ ದೇವದ್ವೇಷಿಗಳ ಬುದ್ಧಿಯನ್ನು ಮೋಹಗೊಳಿಸುವದಕ್ಕಾಗಿ ಕೀಕಟ ದೇಶದ ಮಧ್ಯೆಗಯಾ ಪ್ರದೇಶದಲ್ಲಿ ಜಿನನೆಂಬವನ ಮನೆಯಲ್ಲಿ ಅವತರಿಸಿದ (ಭಾಗವತ - ೧ - ೩)

(ಪುರಾಣನಾಮ ಚೂಡಾಮಣಿ, ಪುಟ ೪೪೧)

### ನಿತ್ಯಾನಂದೇಶ್ವರ ಬಾರಮಾಸದ ಪಾರಿಜಾತದ

### ಅಡಿಟಿಪ್ಪಣಿಗಳಿಗಾಗಿ ಬಳಸಿದ ಸಂಕೇತಗಳು

ಬ: ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ.

ಕ : ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ.

ವಿ: ಗದುಗಿನ ತೋಂಟದಾರ್ಯಮಠದ ವೀರಶೈವ ಅಧ್ಯಯನ ಸಂಸ್ಥೆಯ ಹಸ್ತಪ್ರತಿ.

## ನಿತ್ಯಾನಂದೇಶ್ವರ ಬಾರಮಾಸದ ಪಾರಿಜಾತ

ಸೈರಿಸಲಾರೆ [೧]ಶಂಕರಿ[೧] ಕೇಳು
ಓಂಕಾರದೊಳು ನಿತ್ಯಾನಂದಗೆ ಹೇಳು
ಬಂದುದಿಲ್ಲದೆ ಮನನಿಲ್ಲದೆ [೨]ಪ್ರಾಯ[೨]ಕೊಲ್ಲದೆ
ದೇಹ ಸೂರೆಯಲ್ಲದೆ ಸೈರಿಸಲಾರೆ ಶಂಕರಿಕೇಳು ||ಪಲ್ಲವಿ||

**ಶ್ಲೋಕ**: ಶರಣಾದ್ಧಿ ಶಕ್ತಿಮಣಿಯೆ ಪರಮಾವತಾರಬಂಧು
ಪುರಗಳಾ[೩]ರನು[೩] ಮೀರಿ ಗುರಿಯಿಟ್ಟು [೪]ಗುರುತನೊಂದು[೪]
ಪರಿಪರಿಯಲೊಂದು ಮಾತನರುಹಿ ಪೇಳಿದ[೫]ನಂದು[೫]
ದೊರೆ ನಿತ್ಯಾ[೬]ನಂದೇಶ್ವರ[೬][೭]ಬಾರದೆ[೭] ತಿಂಗಳೊಂದು ೧

**ಪದ**: ಮಾಸಕ್ಕೆ ಮೊದಲು ಚೈತ್ರವು ನೋಡಾ ಬಾರನುಗಡಾ
ಮೀಸಲೊಳು ಬಂದುಕೂಡಾ
ಏಸುದಿನವು ದಾರಿ ನೋ[೮]ಡಲೆ[೮]
ಆಸೆಮಾ[೯]ಡಲೆ[೯] ಹಂಬಲಿಸಿ ಬೇ[೧೦]ಡಲೆ[೧೦]
ಲೇ[೧೧]ಸಿನ[೧೧] ಹೆಣ್ಣಿಗೆ ಮೆಚ್ಚಿದಾ
ಅವಳ [೧೨]ನಚ್ಚಿದಾ ಜ್ಞಾನಾರ್ಥ ಬಿಚ್ಚಿದಾ[೧೨] ೨

ಸೈರಿಸಲಾರೆ ಶಂಕರಿ ಕೇಳು ಜಂಕಾರದೊಳು

---

೧ - ೧ಶಂಕರ (ಬ). ಶಂಕರೆ (ವಿ) ೨ - ೨X (ಕ) ೩ - ೩ರಾರು (ಬ) ೪ - ೪ಗುರುತಲೊಂದು (ಕ) ಗುರುತ್ರಿಲ್ಲಲೊಂದು (ವಿ) ೫ - ೫ನಿಂ (ಕ, ವಿ) ೬ - ೬ನಂದಾಳ್ವರ (ಕ) ೭ - ೭ಬಹರದೆ (ವಿ) ೮ - ೮ ಐದೆ (ಕ, ವಿ) ೯ - ೯ಐದೆ (ಕ, ವಿ) ೧೦ - ೧೦ಐದೆ (ಕ, ವಿ) ೧೧ - ೧೧ಸ (ಕ) ೧೨ - ೧೨ನೆಚ್ಚಿದಾಗನರ್ಥಬಿಚ್ಚಿದೆ (ಕ)

**ಶ್ಲೋಕ**: ಮಂಗಳರೂಪೆಕೇಳು ಭುಜಂಗಭೂಷಣನು ಸೋಂಕಿ
ಹಿಂಗದೆ ಮನಸಿನೊಳಗೆ [೧]ಕಾಣದೆ[೧] ಕಳವಳಿಕೆಯು
ಕಂಗಳಾಗ್ರದಲಿ ತೋರ್ಪ [೨]ತಾರಕೆ[೨] ಬಾಣ ತಾಕಿ
ತಿಂಗಳೆರಡಾಯಿತಲ್ಲೇ ನಿತ್ಯಾನಂದೇಶ ತೊಡಕಿ ೩

**ಪದ**: ವೈಶಾಖಮಾಸ ಬಂದಿತೆ ಚಿತ್ತನೊಂದಿತೆ
ಮನವು ಕಂದಿಕುಂದಿತೆ
ದೇಸಿಗಿತ್ತಿಗೆ ಮನವಿಟ್ಟನೆ
[೩]ಅಭಯಕೊಟ್ಟನೆ[೩] ನಂಬಿದವಳ ಬಿಟ್ಟನೆ
ಮೋಸಮಾಡಿದನೆನ್ನಕೈಡಿಸಿದ
ರಚ್ಚೆಗೆಡಿಸಿದ [೪]ಮಾನ[೪]ಭಂಗ [೫]ಬ[೫]ಡಿಸಿದ ೪

ಸೈರಿಸಲಾರೆ ಶಂಕರಿಕೇಳು............

**ಶ್ಲೋಕ**: ಕಡುಜಾ[೬]ಣೆ[೬] ನಡುಗಣ್ಣಿನಾ ಮೃಡನವತಾರ ಬಂದು
ಪಿಡಿದು ಮುಂಗೈಯ್ಯ ಸೆರಗ[೭]ನೆ[೭]ಳೆದನೇತಕೆ ಬಂದು
ಒಡೆಯರುಳ್ಳ ಮಡದಿಯ ದುಡುಕುಮಾ[೮]ಡುವರೆ ಬಂದು[೮]
ಗಡಿ[೮]ಕೋಟಿ[೮] ನಿತ್ಯಾನಂದಾ ತಡೆದೆರಡು ತಿಂಗಳೊಂದು. ೫.

**ಪದ**: ಜೇಷ್ಠಮಾಸವು ಬಂದಿತಲ್ಲವೆ ಪ್ರಿಯನಿಲ್ಲ[೯]ದೆ[೯]
ವಿರಹವೆಗ್ಗಳವಲ್ಲವೆ ನಿಷ್ಠುರವನು [೧೦]ಚಿಮ್ಯಾಡಿ[೧೦] [೧೧]ಬಾರನೆ[೧೧]
ಮುಖವದೋರನೆ [೧೨]ರಟ್ಟುಮಾಡುವರೇನೆ[೧೨]
ಕಷ್ಟಪಡಿಸುವುದುಚಿತವೆ [೧೩]ಪ್ರಾಣಘಾತಮೆ
ಎನ್ನೊಳೇತಕೆ ಪಂಥವೆ[೧೩]
ಸೈರಿಸಲಾರೆ ಶಂಕರಿ ಕೇಳು......... ೬

---

೧ - ೧ತಾಳದೆ (ಕ. ಏ) ೨ - ೨ ತಾರಕನ (ಬ) ೩ - ೩ ಲಸಕೊಟ್ಟನೇನ (ಕ) ೪ - ೪ ಮನ (ಬ) ೫ - ೫ ಬಿ (ಬ) ೬ - ೬ ಣ (ಬ. ಏ) ೭ - ೭ ಸೆ (ಕ. ಏ)ಡಿದನೆಂದು (ಬ) ೮ - ೮ ಕೊಟ್ಟ (ಏ) ೯ - ೯ ವೆ (ಬ. ಏ) ೧೦ - ೧೦ ಮಾಡಿ (ಬ.ಏ) ೧೧ + ಮಿಕ್ಕ ಸುಖವದೋರನೇ(ಕ) ೧೨ - ೧೨ X (ಕ) ೧೩ - ೧೩ ಸನ್ಮತವೆ ಹಿಂಗೆಯ ಸಮ್ಮತವೆ (ಕ)

**ಶ್ಲೋಕ**: ಚಂದನಗಂಧಿ ಕೇಳು [೧]ಚದುರ ನೆನೆದುದಿಲ್ಲ[೧]
ಅಂದು ಅರಘಳಿಗಿ ಅವನು [೨]ನಿಂ[೨]ದು ಮಾತಾಡಲಿಲ್ಲ
ಬಂದು ಸೋಂಕಿದ ತಿಂಗಳಾಹೊಂದಿ ನಾಲ್ಕಾದವಲ್ಲ
ಚಂದವೆ ತನಗೆ ನಿತ್ಯಾನಂ[೩]ದನೆಂಬರಸ ಬಲ್ಲ[೩] ೭

**ಪದ**: ಬಂದಿತು ಆಷಾಢಮಾಸವೆ [೪]ಅಂಗದೇಶವೆ[೪] ಚಿ[೫]ಕ್ಕಪ್ರಾಯದೊಳಸೆವೆ[೫]
[೬]ಚಂದಚಂದದ ಹೂವ ಧರಿಸುವೆ[೬] ತನ್ನ ಹರಸುವೆ
ಒಂದು ದಿನ [೭]ವರುಷವೆ[೭] [೮]ಮಂದರ ಮಂದಿರಕೆ[೮]
ಬಾರನೆ ಮಂಚವೇರನೆ ಮಿಕ್ಕ ಸುಖವು ತೋರನೆ
ಸೈರಿಸಲಾರೆ ಶಂಕರಿ ಕೇಳು....... ೮

**ಶ್ಲೋಕ**: ಹರಿಣಾಕ್ಷಿ ಹಂಸಗಮನೆ ಹರಣದೊಡೆಯನೆ [೯]ಇಂ[೯]ದು
ಎರವಾಗಿ ತಿಂಗಳೈದು ಸುಳುಹುದೋರನೆ ಬಂದು
[೧೦]ಒರಗುತಲಿ[೧೦] ಒಂದು ಕನಸು ಇರುಳು ಕಂಡೆನೆ ಒಂದು
ಪರಮಗುರು ನಿತ್ಯಾನಂದ ಕರೆದ [೧೧]ಮುಂದಿಟ್ಟು ಬಂದು[೧೧] ೯

**ಪದ**: ಶ್ರಾವಣಮಾಸದ ಕೀರ್ತಿಯೊ ಪರಮಮೂರ್ತಿಯೊ
ಲಿಂಗದೊಳರ್ತಿಯೊ ಭವಬಂಧನಗಳೆಲ್ಲ ಖಂಡಿಸಿ
ಮನದಂಡಿಸಿ ಹಲವನೆಲ್ಲ ತುಂಡಿಸಿ
ಶಿವಯೆಂಬ ಧ್ಯಾನವ ನೆಲೆಗೊಂಡು
ಮನ[೧೨]ಬಲ[೧೨]ಗೊಂಡು ಬ್ರಹ್ಮವಿದ್ಯೆ [೧೩]ಕಲೆ[೧೩]ಗೊಂಡು.

ಸೈರಿಸಲಾರೆ ಶಂಕರಿ ಕೇಳು ........ ೧೦

---

೧ - ೧ಚಂದ್ರಗೆ ನಂದದಿಲ್ಲಾ (ಬ) ೨ - ೨ ಬಂ (ಬ) ೩ - ೩ ನಂದೇಶನೆಂಬ ಲಿಂಗಾ(ಬ)
೪ - ೪ ಸಂತೋಷವೆ (ಕ) ೫ - ೫ X (ಕ) ೬ - ೬ X (ಕ. ವಿ) ೭ - ೭ ಮರಸುವೆ (ಬ. ವಿ)
೮ - ೮ ಮಂದರಧರ ಮೆಚ್ಚಿ (ಕ. ವಿ) ೯ - ೯ ಬಂ (ಬ) ೧೦ - ೧೦ ಒರಗಿರುವ (ಕ. ವಿ)
೧೧ - ೧೧ ಮಲಗಿಳಿನಿಂದಾ (ಕ) ೧೨ - ೨೩ ಕಲೆ (ಬ) ಕಲ್ಲೀ (ವಿ)
೧೩ - ೧೩ ನೆ(ಬ) ಕಲ್ಲೆ (ವಿ)

**ಶ್ಲೋಕ**: ರಂಗದುಟಿ ರಮಣಿಕೇಳು ಶೃಂಗಾರವೆನಗೇತಕೆ
ಮಂಗಳಮೂರ್ತಿಯನ್ನಂಗಳದೊಳು ಬಾರನೇಕೆ
ತಿಂಗಳಾ[೧]ರು ತರಂಗಾ[೧] ಸಂಗಸುಖದೋರನೇಕೆ
ಕಂಗಳೊಳು ನಿತ್ಯಾನಂದ ಹಿಂಗ[೨]ದೆಸೆ[೨]ಯನೇಕೆ ೧೧

**ಪದ**: ಭಾದ್ರಪದಕೆ ಬಂದಕೂಡನೆ [೩]ದಯವ ಮಾಡನೆ[೩]
ರಾಜ ಚಂದ್ರಚೂಡನೆ ಸಿದ್ಧವಿದ್ಯೆಗಳನು ಅಡಿಮೆಟ್ಟಿ
ಬಂಧನಕಟ್ಟಿ ಎನ್ನಮೇಲೆ ದಯಹುಟ್ಟಿ
ಮುದ್ರೆಲಕ್ಷಣಗಳ ನೋಡುತ [೪]ಸೂರೆ[೪] ಮಾಡುತ
ಭೇರಿನಾದ ಕೇಳುತಾ ೧೨

ಸೈರಿಸಲಾರೆ ಶಂಕರಿ ಕೇಳು...........

**ಶ್ಲೋಕ**: ಜಗದಂಬಿಕೆ ಕೇಳೆಲೆ ಜಾತಿ[೫]ವನಿತೆ[೫]ಯರೊಳಾಡಿ
ಬಗೆಬಗೆಯ ಸುಖವನೆಲ್ಲ ಸೂರೆಮಾಡ್ಯಾನು ಕೂಡಿ
[೬]ಸೊಗಸುಸಾಗರನು[೬] ಒಂದೂ [೭]ತಿಂಗಳನು ಬಾರ[೭] ನೋಡಿ
[೮]ಯುಗ[೮]ವಾಯಿತರಘಳಿಗೆಯು ನಿತ್ಯಾನಂದೇಶನ ನೋಡಿ ೧೩

**ಪದ**: ಉಮ್ಮಯ್ಯದಿ ಆಶ್ವೀಜ ಬಂದಿತೆ ಮಾಡಿದೆ ಚಿಂತೆ
ರಮಣನಿಲ್ಲದೆ [೯]ಭ್ರಾಂತೆ[೯] ವರ್ಮವರಿದು ಕರಸಮ್ಮಯ್ಯ
ಬೇಗದಮ್ಮಯ್ಯ [೧೦]ಹಂಸಪದ[೧೦] ಸೋಮಯ್ಯ
ಧರ್ಮದರಾಶಿಗೊದಗುವರಾರೆ ಶೀಘ್ರದಿ ತೋರೆ
[೧೨]ಕಾಮಿನಿ ಚಂದನ ಸೂರೆ[೧೨] ೧೪

ಸೈರಿಸಲಾರೆ ಶಂಕರಿ ಕೇಳು..........

---

೧ - ೧ ರಾಗುತಬರೆ (ಎ) ೨ - ೨ ಬೆರೆ (ಎ) ಸುಳಿ (ಕ) ೩ - ೩ ಸಂಎಯನೋಡನೆ (ಬ. ಎ)
೪ - ೪ ಸೂರ್ಯ (ಬ) ೫ - ೫ X (ಕ) ೬ - ೬ ಸೊಗಸಿನ ಸುಖಿಕೆ (ಎ)
೭ - ೭ ತಿಂಗಳೊಳುದಾರಿ (ಎ) [ಮೂರನೆಯ ಚರಣ 'ಕ' ಪ್ರತಿಯಲ್ಲಿಲ್ಲ]
೮ - ೮ ಮನ (ಕ) ೯ - ೯ ಚಿಂತೆ (ಬ) ೧೦ - ೧೦ ಹಸ್ತಪಾದ (ಬ) ಹಂಸಪತ (ಕ)
೧೧ - ೧೧ ಉಟ್ಟ (ಬ. ಎ) ೧೨- ೧೨ ಕಾರಮಿಂಚೆಂದು ಸಾರೆ (ಬ. ಎ)

**ಶ್ಲೋಕ**: ಕೆಂಡಗಣ್ಣಿನ [೧]ಕೋಪ[೧] ಕೋಮಲಾಂಗನೆಯೆ ಕೇಳು
[೨]ಹಿಂಡು ಜನವೆಲ್ಲ ನೋಡಿ ಹಾಸ್ಯ ಮಾಡಿದರೆನ್ನೊಳು[೨]
[೩]ಭಂಡುಮಾಡಿದ ಸುದ್ದಿಯ[೩] ತಿಂಗಳನು ಎಂಟು ಹೇಳು
[೪]ಮಂಡಲದಿ ನಿತ್ಯಾನಂದ ಗಂಡು ವಿದ್ಯವ ಪೇಳು[೪] ೧೫

**ಪದ**: ಕಾರ್ತಿಕ ಮಾಸದ ಕಥೆಗಳು ಪುಣ್ಯತಿಥಿಗಳು ನೋಡಿ
ಮೂರುಕ್ಷೇತ್ರಗಳನು ಜಾತ್ರೆಯ ತೇರುಗಳ ತೋರಿಸಿ
ಮೋಹವೇರಿಸಿ ಕಾಯಪುರದೊಳ [೫]ಗ[೫]ರಿಸಿ ಅರ್ತಿನೋಡುವ
[೬]ಗೆಳದೇರಲ್ಲಾ[೬] ನೋಡಿರಿ ನೀವೆಲ್ಲ ಇವನ ಸಂಗ ಬ[೭]ಹು[೭]ಹೊಲ್ಲ ೧೬
ಸೈರಿಸಲಾರೆ ಶಂಕರಿ ಕೇಳು ......

**ಶ್ಲೋಕ**: ಕುಂಭಕುಚೆ ಬಿಂಭಾಧರೆ ಹಂಬಲಿಸಿ ಬಡವಾದೆನೆ
ರಂಬಿಯವರ ಮನದ ನೋವ ಥಂಬಿಸಲೋ[೮]ಲ್ಲನೇನೆ[೮]
ಒಂಬತ್ತು ತಿಂಗ[೯]ಳಾಗಿ[೯] ಇಂಬಾಗಿ ಇದ್ದನೇನೆ
ಶಂಭುವೆ ನಿತ್ಯಾನಂದ ಕುಂಭಿನಿಯೊಳೆಸೆ[೧೦]ದನೇನೆ[೧೦] ೧೭

**ಪದ**: ಮಾರ್ಗಶಿರಕೆ ಮನವಿಟ್ಟನೆ ಹೆಣ್ಣಬಿಟ್ಟನೆ
ಬೇಡಿದ ಫಲಗಳ ಕೊಟ್ಟನೆ ಶೀಘ್ರದಿ
ಸಾವಿರದಿಪ್ಪತ್ತೊಂದು ಆರುನೂರೊಂದು
ರಾಜಶಿವಶಿವ ಎಂದು ಭರ್ಗೋದೇವಗೆ
ಮೊರೆಯಿಡುವನೆ ತಾನೆ ಬಿಡುವನೆ
[೧೧]ಮುಕ್ತಿಗೂಡಿಬಿಡುವನೆ[೧೧] ೧೮
ಸೈರಿಸಲಾರೆ ಶಂಕರಿ•ಕೇಳು ......

---

೧ - ೧ ರೂಪೆ (ವಿ. ಕ) ೨ - ೨ ಹಿಂಡುಜನವೆಲ್ಲ ನೋಡಿ ಹಾಸ್ಯಮಾಡುವರು ನಾಳೆ (ಕ)
೩- ೩ ಭಂಡದ ಸುದ್ದಿಗಳನು (ಬ) ೪ - ೪ X (ಕ) ೫ - ೫ ಗ (ವಿ. ಕ) ೬ - ೬ ಗೆಣತಿಯರೆಲ್ಲ (ವಿ)
೭ - ೭ ಉ (ಕ) ೮ - ೮ಲ್ಲಾತನೆ (ವಿ) ೯ - ೯ ಳುಲ್ಲೊಗಲ್ಲಿ (ವಿ) ಳಲ್ಲೀ (ಬ) ೧೦ - ೧೦ ದಾತನೇ
(ಬ) ವಾಸಾದನೆ (ಕ) ೧೧ - ೧೧ X (ವಿ)

**ಶ್ಲೋಕ**: ಕನ್ನೆಕಸ್ತೂರಿಗಂಧೆ ಕೇಳೆಲೆ ಎನ್ನಮಾತ
[೧]ಭಿನ್ನ[೧]ಭಿನ್ನವಾಗಿ ತೋರುವುದೇನು ನಿತ್ಯ
ಇನ್ನು ನಿಷ್ಠೂರಮಾಡಿ ಈರೈದು ತಿಂಗಳ ತಾ
ಸನ್ಮತವೆ ತನಗೆ ನಿತ್ಯಾನಂದೇಶನೆಂಬ ದಾತಾ ೧೯

**ಪದ**: ಪುಷ್ಯಮಾಸವೆಂಬ ಹೆಸರಿಗೆ ತುಂಬಿದ ಬಸುರಿಗೆ
[೨]ಬಯಸಿಬಂದೆನೆ ತನಗೆ ಮುಸಿಕಿಕ್ಕಿ ಮಾತನಾಡಿದ[೨]
ಭೇದ ಆತ್ಮದ ಸ್ವಾದ ತನುವಿನೊಳಗೆ ವಿನೋದ
ಹೆಸರಿಟ್ಟು ಕರಿ ಗುರುಮಂತ್ರವ ಸ್ವತಂತ್ರವ ಜೀವ ಪರಮತಂತ್ರವ ೨೦

ಸೈರಿಸಲಾರೆ ಶಂಕರಿ.........

**ಶ್ಲೋಕ**: [೩]ತೋರ ಮುಡಿದುಂಬಿ[೩] ಗುರುಳೆ ಸಾರುವೆನೆ ಇವನ ಸಂಗ
ಊರುಕೇರಿಗಳ ಸೇರಿ ಮಾಡುವನೆ ಮಾನಭಂಗ
ಆರೈದು ತಿಂಗಳಲ್ಲಿ ತೋರನೇ ತನ್ನ ಅಂಗ
ವಾರಿಜಮುಖಿಯೆ ನಿತ್ಯಾನಂದೇಶನೆಂಬ ಲಿಂಗ ೨೧

**ಪದ**: ಜಾರಿಹೋದನು ಮಾಘಮಾಸದಿ ಪರವಾಸದಿ
ಹಸ್ತವಿಟ್ಟ ಮಸ್ತಕದಿ ಸೇರಿ ಅಮೃತವನು ಕರೆಯನೆ
ಬಂದು ಬೆರೆಯನೆ ಆರುಸ್ಥಲವ ಮೀರಿದನೆ
ತಾರಕಬ್ರಹ್ಮವೆ ತಾನೆಂದು ತೋರಿ[೫]ದನಂದು[೫] ಹೀಂಗೆ ಮಾಡಿದಬಂದು[೫] ೨೨

ಸೈರಿಸಲಾರೆ ಶಂಕರಿ ಕೇಳು ......

---

೧ - ೧ ಚಿನ್ನ (ಕ) ೨ - ೨ ಮನಕಾಗದೊರಿಕೆಯಿಸು ಕಿಲಿಕಿಲಿ (ಕ)
೩ - ೩ ಎರಳಿನೋಟ (ಕ) ೪ - ೪ ಹೇಳಿದ (ಬ) ೫ - ೫ ರಾಜಶಿವಯೋಗಿ ಬಂದು (ಕ)

**ಶ್ಲೋಕ**: ರಸಿಕರನ್ನಳೆ ಕೇಳು ರಾವುಮಾಡುವ ನೀರೆ
ಪಸರಿಸಿದ ಕಮಲದಲ್ಲಿ ವಾಸವಾಗುವ ನೆರೆ
ಬಸವಾದಿ ಪ್ರಮಥಗಣವು ತಿಂಥಿಣಿಯೆಂದು ದೊರೆ
ಅಸಮಾಕ್ಷ ನಿತ್ಯಾನಂದ ಫಾಲ್ಗುಣಕೆ ನಿಂದ ಸಾರೆ ೨೩

**ಪದ**: ಬಾರನೇತಕ ಬಾರಮಾಸಕೆ [1]ದೇಹ[1]ವಾಸಕೆ
ಮಹಲಿಂಗ [2]ಸಾ ಸಿರ[2]ಕೆ ವರಗುರು ನಿತ್ಯಾನಂದೇಷನು
ಭವನಾಶನು ಕೈಲಾಸವಾಸನು ನೆಲೆಗೂಡಿ ಅಗಲಿದ
ಸತಿಯೊಳು ಸುಮತಿಯೊಳು ನಿತ್ಯಸ್ಮರಣೆಯೊಳಿಹಳು ೨೪

ಸೈರಿಸಲಾರೆ ಶಂಕರಿ ಕೇಳು ಓಂಕಾರದೊಳು.....

---

೧ - ೧ ಪರ (ಕ) ೨ - ೨ ಸಾರಕ್ಕೆ (ಬ) ಶಾರಿರಕೆ (ವಿ)

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ. ಅವಕಾಶವೂ ಇದೆ.

'ಬಾರಮಾಸ' ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ. ಉತ್ತರ ಭಾರತದ ಭಾಷೆಗಳಲ್ಲಿ ವಿಪುಲವಾದ ಈ ಪ್ರಕಾರವು ಪ್ರಕೃತಿ ವರ್ಣನೆ ಮತ್ತು ವಿಪ್ರಲಂಭ ಶೃಂಗಾರಗಳನ್ನು ತನ್ನ ಕೇಂದ್ರದಲ್ಲಿ ಹೊಂದಿರುತ್ತದೆ. ಕನ್ನಡದಲ್ಲಿ ಇದುವರೆಗೆ ಎರಡೇ ಎರಡು 'ಬಾರಮಾಸ'ಗಳು. ಇದೇ ಮೊದಲ ಬಾರಿಗೆ ಇಲ್ಲಿ ಪ್ರಕಟವಾಗುತ್ತಿವೆ. ಹಿರಿಯ ಲೇಖಕರಾದ ಶಾಂತರಸರು ಈ ಕೃತಿಯನ್ನು ಪರಿಶ್ರಮ ವಹಿಸಿ, ಅಚ್ಚುಕಟ್ಟಾಗಿ ಸಂಪಾದಿಸಿಕೊಟ್ಟಿದ್ದಾರೆ. 'ಬಾರಮಾಸ'ದ ಪ್ರಕಟಣೆ ಕನ್ನಡ ವಿಶ್ವವಿದ್ಯಾಲಯದ ಮತ್ತೊಂದು ಹೆಮ್ಮೆಯ ಸಾಧನೆ.

**ಚಂದ್ರಶೇಖರ ಕಂಬಾರ**
ಕುಲಪತಿ